(ಕರ್ನಾಟಕ ರಾಜ್ಯಪತ್ರದ (ವಿಶೇಷ ಸಂಚಿಕೆ) ಭಾಗ IV - 2ಎ, ದಿನಾಂಕ 5ನೇ ಸೆಪ್ಟೆಂಬರ್ 1985 ರಲ್ಲಿ, ಸಂಖ್ಯೆ 465, ಪುಟ 3 ಎಂದು ಪ್ರಕಟಿಸಲಾಗಿದೆ.)

## XXIII

1987ರ ತಿದ್ದುಪಡಿ ಮಾಡುವ ಅಧಿನಿಯಮ 16:- (ವಿಧೇಯಕದ ಮಂಡನೆಯ ಸಮಯದಲ್ಲಿ ಸೇರಿಸಿದಂತೆ)

ಮಾನ್ಯ ಮುಖ್ಯಮಂತ್ರಿಗಳು ಸದನದಲ್ಲಿ ನೀಡಿದ ಭರವಸೆಯಂತೆ ಈ ಮುಂದಿನವರಿಗೆ ಈ ಕೆಳಕಂಡ ಪ್ರಯೋಜನಗಳನ್ನು ನೀಡಲು ಕರ್ನಾಟಕ ವಿಧಾನ ಮಂಡಲದ ಸಂಬಳಗಳು, ನಿವೃತ್ತಿ ವೇತನಗಳು ಮತ್ತು ಭತ್ಯೆಗಳ ಅಧಿನಿಯಮ, 1956ನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

ಸದಸ್ಯರುಗಳಿಗಾಗಿ,-

(ಎ) ವೇತನವನ್ನು 700 ರೂ.ಗಳಿಂದ 1000.ರೂ.ಗಳಿಗೆ ಹೆಚ್ಚಿಸುವುದು.

(ಬಿ) ದೂರವಾಣಿ ಕರೆಗಳು, ಅಂಚೆ ವೆಚ್ಚಗಳು, ಮುಂತಾದವುಗಳಿಗೆ ಸಂಬಂಧಿಸಿದ ವೆಚ್ಚಗಳನ್ನು ಭರಿಸುವುದಕ್ಕಾಗಿ ಭತ್ಯೆಗಳನ್ನು ರೂ. 1300 ರಿಂದ 2000 ವರೆಗೆ ಹೆಚ್ಚಿಸುವುದು.

(ಸಿ) ಪ್ರಯಾಣಕ್ಕಾಗಿ ನೀಡುವ ರೈಲ್ವೆ ಕೂಪನ್ನುಗಳನ್ನು ಪ್ರತಿ ವರ್ಷ ರೂ. 2000 ದಿಂದ 5000 ರೂ.ಗಳಿಗೆ ಹೆಚ್ಚಿಸುವುದು.

(ಡಿ) ಪ್ರತಿ ಕಿ.ಮೀ.ಗೆ ಮೈಲು ಭತ್ಯೆಯನ್ನು 1.25 ಪೈಸೆಯಿಂದ 2.50 ಪೈಸೆಗೆ ಹೆಚ್ಚಿಸುವುದು.

(ಇ) ದಿನಭತ್ಯೆಯನ್ನು 51 ರೂ.ಗಳಿಂದ 75 ರೂ.ಗಳಿಗೆ ಹೆಚ್ಚಿಸುವುದು.

(ಎಫ್) 1000 ರೂ.ಗಳ ನಿವೃತ್ತಿ ವೇತನದ ಮೇಲಿನ ಗರಿಷ್ಠ ಮಿತಿಯನ್ನು ತೆಗೆದುಹಾಕುವುದು ಮತ್ತು ಸದಸ್ಯರುಗಳಾಗಿ ಹದಿನೈದು ವರ್ಷಗಳಿಗಿಂತ ಕಡಿಮೆಯಿಲ್ಲದಂತೆ ಸೇವೆ ಸಲ್ಲಿಸಿದ ಸದಸ್ಯರುಗಳಿಗೆ 750 ರೂ.ಗಳ ನಿವೃತ್ತಿ ವೇತನವನ್ನು ನೀಡುವುದು.

ಪೀಠಾಸೀನ ಅಧಿಕಾರಿ, ವಿರೋಧ ಪಕ್ಷದ ನಾಯಕರು ಮತ್ತು ಸರ್ಕಾರಿ ಮುಖ್ಯ ಸಚೇತಕರುಗಳಿಗಾಗಿ:-

(ಎ) ಸಾರಿಗೆ ಭತ್ಯೆಯನ್ನು ಪ್ರತಿ ತಿಂಗಳಿಗೆ 2000 ರೂ.ಗಳಿಗೆ ಹೆಚ್ಚಿಸುವುದು;

(ಬಿ) ಮೈಲುಭತ್ಯೆಯನ್ನು ಪ್ರತಿ ಕಿ.ಮೀ.ಗೆ 1.50 ರೂ.ಗಳಿಂದ 2.50 ರೂ.ಗಳಿಗೆ ಹೆಚ್ಚಿಸುವುದು.

(ಸಿ) ರಾಜ್ಯದೊಳಗೆ ದಿನಭತ್ಯೆಯನ್ನು 100 ರೂ.ಗಳಿಗೂ ಮತ್ತು ರಾಜ್ಯದ ಹೊರಗೆ ದಿನಭತ್ಯೆಯನ್ನು 150 ರೂ.ಗಳಿಗೆ ಹೆಚ್ಚಿಸುವುದು.

(ಡಿ) ದೇಶದ ಹೊರಗೆ ಕೈಗೊಳ್ಳುವ ಪ್ರವಾಸಕ್ಕಾಗಿ ಪ್ರಯಾಣ ಮತ್ತು ಇತರ ಭತ್ಯೆಗಳನ್ನು ರಾಜ್ಯ ಸರ್ಕಾರದ ಸಚಿವರುಗಳಿಗೆ ಸಮನಾಗಿ ಭರಿಸುವುದು.

(ಇ) ಆತಿಥ್ಯ ಭತ್ಯೆಯನ್ನು ಸಭಾಧ್ಯಕ್ಷರಿಗೆ 10,000 ರೂ.ಗಳಿಂದ 15,000 ರೂ.ಗಳಿಗೂ ಮತ್ತು ಸಭಾಪತಿಗೆ 6,000 ರೂ.ಗಳಿಂದ 10,000 ರೂ.ಗಳಿಗೂ ಮತ್ತು ವಿರೋಧ ಪಕ್ಷದ ನಾಯಕರಿಗೆ 5,000 ರೂ.ಗಳಿಗೂ ಮತ್ತು ಉಪಸಭಾಧ್ಯಕ್ಷ, ಉಪಸಭಾಪತಿ ಮತ್ತು ಸರ್ಕಾರಿ ಮುಖ್ಯ ಸಚೇತಕರಿಗೆ 4,000 ರೂ.ಗಳಿಗೆ ಹೆಚ್ಚಿಸುವುದು.

(ಎಫ್) ಸಭಾಪತಿ, ಉಪಸಭಾಪತಿ, ಸಭಾಧ್ಯಕ್ಷ, ಉಪಸಭಾಧ್ಯಕ್ಷ, ವಿರೋಧ ಪಕ್ಷದ ನಾಯಕ, ಸರ್ಕಾರಿ ಮುಖ್ಯ ಸಚೇತಕರಿಗೆ ಅವರು ತಮ್ಮ ಸ್ವಂತ ಮನೆಗಳಲ್ಲಿ ವಾಸವಾಗಿದ್ದರೆ, ಮನೆ ಬಾಡಿಗೆ ಭತ್ಯೆಯನ್ನು 500 ರೂ.ಗಳಿಂದ 1000 ರೂ.ಗಳಿಗೆ ಹೆಚ್ಚಿಸುವುದು.

(ಜಿ) ಸಭಾಪತಿ, ಸಭಾಧ್ಯಕ್ಷ ಮತ್ತು ವಿರೋಧ ಪಕ್ಷದ ನಾಯಕರ ಸಂಬಳಗಳನ್ನು ಪ್ರತಿ ತಿಂಗಳಿಗೆ 2,500 ರೂ.ಗಳಿಗೂ ಮತ್ತು ಉಪಸಭಾಪತಿ, ಉಪಸಭಾಧ್ಯಕ್ಷ, ಸರ್ಕಾರಿ ಮುಖ್ಯ ಸಚೇತಕರಿಗೆ ಪ್ರತಿ ತಿಂಗಳಿಗೆ 2,250 ರೂ.ಗಳಿಗೆ ಹೆಚ್ಚಿಸುವುದು.

ಕೆಲವು ಆನುಷಂಗಿಕ ತಿದ್ದುಪಡಿಗಳನ್ನೂ ಸಹ ಮಾಡಲಾಗಿದೆ.

ಆದ್ದರಿಂದ ಈ ವಿಧೇಯಕ.

(1987ರ ಎಲ್.ಎ ವಿಧೇಯಕ ಸಂಖ್ಯೆ 32 ರಿಂದ ಪಡೆಯಲಾಗಿದೆ.)

## XXIV

1988ರ ತಿದ್ದುಪಡಿ ಮಾಡುವ ಅಧಿನಿಯಮ 9:- ಕರ್ನಾಟಕ ವಿಧಾನ ಮಂಡಲದ ಸಂಬಳಗಳು, ನಿವೃತ್ತಿ ವೇತನಗಳು ಮತ್ತು ಭತ್ಯೆಗಳ ಅಧಿನಿಯಮ, 1956ರ 11ಎ ಪ್ರಕರಣದ (1)ನೇ ಉಪಪ್ರಕರಣದ (ಎ) ಖಂಡವು, ಸದಸ್ಯನಾಗಿ ಹತ್ತು ವರ್ಷಗಳಿಗೆ ಕಡಿಮೆಯಿಲ್ಲದಂತೆ ಸೇವೆ ಸಲ್ಲಿಸಿದ ಸದಸ್ಯನಿಗೆ ಪ್ರತಿ ತಿಂಗಳು ಗರಿಷ್ಠ 500 ರೂ.ಗಳ ನಿವೃತ್ತಿ ವೇತನವನ್ನು ಸಂದಾಯ ಮಾಡುವುದನ್ನು ಉಪಬಂಧಿಸುತ್ತದೆ.

ಸದರಿ ಉಪಪ್ರಕರಣದ (ಬಿ) ಖಂಡವು,-

(ಎ) ಸಂವಿಧಾನ ಸಭೆ;

(ಬಿ) ಮೈಸೂರು ಪ್ರಜಾಪ್ರತಿನಿಧಿ ಸಭೆ;

(ಸಿ) ಮೈಸೂರು ವಿಧಾನಸಭೆ;

(ಡಿ) ಯಾವುದೇ ರಾಜ್ಯದ (ಭಾರತದ ರಾಜ್ಯವನ್ನೊಳಗೊಂಡ) ಅಥವಾ ಪ್ರಾಂತ್ಯ ಅಥವಾ ಈಗ ಕರ್ನಾಟಕ ರಾಜ್ಯದ ಭಾಗವಾಗಿರುವಂಥ ಅದರ ಯಾವುದೇ ಪ್ರದೇಶದ ವಿಧಾನಸಭೆ ಅಥವಾ ವಿಧಾನ ಪರಿಷತ್ತು- ಇವುಗಳ ಸದಸ್ಯರುಗಳಾಗಿ ಸೇವೆ ಸಲ್ಲಿಸಿದ ವ್ಯಕ್ತಿಗಳಿಗೆ ಪ್ರತಿ ತಿಂಗಳು 300 ರೂ.ಗಳ ನಿವೃತ್ತಿ ವೇತನವನ್ನು ಸಂದಾಯ ಮಾಡಬೇಕೆಂದು ಉಪಬಂಧಿಸುತ್ತದೆ.

(1)ನೇ ಉಪಪ್ರಕರಣದ (ಎ) ಮತ್ತು (ಬಿ) ಖಂಡಗಳ ಅಡಿಯಲ್ಲಿ ವ್ಯಕ್ತಿಗೆ ಸಂದಾಯ ಮಾಡತಕ್ಕ ನಿವೃತ್ತಿ ವೇತನದ ಒಟ್ಟು ಮೊತ್ತವು ಪ್ರತಿ ತಿಂಗಳು 500 ರೂ.ಗಳನ್ನು ಮೀರದಂತೆ 11ಎ ಪ್ರಕರಣದ (1ಎ) ಉಪಪ್ರಕರಣದಲ್ಲಿ ಉಪಬಂಧ ಕಲ್ಪಿಸಲಾಗಿದೆ.

ಹದಿನೈದು ವರ್ಷಗಳಿಗಿಂತ ಕಡಿಮೆಯಿಲ್ಲದೆ ಸೇವೆ ಸಲ್ಲಿಸಿದ ವಿಧಾನ ಮಂಡಲದ ಸದಸ್ಯರುಗಳಿಗೆ 750 ರೂ.ಗಳ ನಿವೃತ್ತಿ ವೇತನವನ್ನು ನೀಡಲು 1987ರ ತಿದ್ದುಪಡಿ ಅಧಿನಿಯಮ 16ರ ಮೂಲಕ 11ಎ ಪ್ರಕರಣದ (1)ನೇ ಉಪಪ್ರಕರಣವನ್ನು ತಿದ್ದುಪಡಿ ಮಾಡಲಾಗಿದೆ.

ಈ ತಿದ್ದುಪಡಿಯಿಂದಾಗಿ (1)ನೇ ಉಪಪ್ರಕರಣದ (ಎ) ಮತ್ತು (ಬಿ) ಖಂಡಗಳ ಅಡಿಯಲ್ಲಿ ವ್ಯಕ್ತಿಗೆ ಸಂದಾಯ ಮಾಡಬೇಕಾದ ನಿವೃತ್ತಿ ವೇತನದ ಒಟ್ಟು ಮೊತ್ತವನ್ನು ಪ್ರತಿ ತಿಂಗಳಿಗೆ 750 ರೂ.ಆಗೆ ಹೆಚ್ಚಿಸಿ (1ಎ) ಉಪಪ್ರಕರಣವನ್ನೂ ಸಹ ತಿದ್ದುಪಡಿ ಮಾಡುವುದು ಅಗತ್ಯವಾಗಿದೆ. ಪ್ರಮಾದವಶಾತ್ ತಪ್ಪಿನಿಂದಾಗಿ (1ಎ) ಉಪಪ್ರಕರಣಕ್ಕೆ ಆನುಷಂಗಿಕ ತಿದ್ದುಪಡಿಯನ್ನು ತರಲಾಗಲಿಲ್ಲ. ಈಗ ತಿದ್ದುಪಡಿ ತರಲಾಗುತ್ತಿದೆ.

ಆದ್ದರಿಂದ ಈ ವಿಧೇಯಕ.

(ಕರ್ನಾಟಕ ರಾಜ್ಯಪತ್ರದ (ವಿಶೇಷ ಸಂಚಿಕೆ) ಭಾಗ IV - 2ಎ, ದಿನಾಂಕ 23ನೇ ಜನವರಿ 1988 ರಲ್ಲಿ, ಸಂಖ್ಯೆ 52, ಪುಟ 3 ಎಂದು ಪ್ರಕಟಿಸಲಾಗಿದೆ.)

## XXV

1991ರ ತಿದ್ದುಪಡಿ ಮಾಡುವ ಅಧಿನಿಯಮ 5:- ವಿಧಾನ ಮಂಡಲದ ಸದಸ್ಯರುಗಳಿಗೆ ಮತ್ತು ಸಂಸದೀಯ ಕಾರ್ಯನಿರ್ವಾಹಕರಿಗೆ ಸಂಬಳ ಮತ್ತು ಭತ್ಯೆಗಳು ಹಾಗೂ ಇತರ ಪ್ರಯೋಜನಗಳನ್ನು ಹೆಚ್ಚಿಸುವ ಬಗ್ಗೆ ಪರಿಶೀಲಿಸಲು ರಚಿಸಲಾದ ಸಮಿತಿಯ ಶಿಫಾರಸ್ಸಿನ ಮೇಲೆ ಕೆಳಗಿನ ತಿದ್ದುಪಡಿಗಳನ್ನು ಕರ್ನಾಟಕ ವಿಧಾನ ಮಂಡಲದ ಸಂಬಳಗಳು, ನಿವೃತ್ತಿ ವೇತನಗಳು ಮತ್ತು ಭತ್ಯೆಗಳ ಅಧಿನಿಯಮ, 1956ಕ್ಕೆ ಈ ಮುಂದಿನ ತಿದ್ದುಪಡಿಗಳನ್ನು ತರಲು ಪ್ರಸ್ತಾವಿಸಲಾಗಿದೆ:

ಮಾಜಿ ಸದಸ್ಯರುಗಳಿಗಾಗಿ,-

1. ನಿವೃತ್ತಿ ವೇತನವನ್ನು ಒಂದು ಅವಧಿಗಾಗಿ ತಿಂಗಳಿಗೆ 1,000 ರೂ.ಗಳಿಗೆ ಹೆಚ್ಚಿಸುವುದು. ನಂತರದ ಪ್ರತಿಯೊಂದು ವರ್ಷಕ್ಕೆ ತಿಂಗಳಿಗೆ ಗರಿಷ್ಠ 1,500 ರೂ.ಗಳಿಗೊಳಪಟ್ಟು ಪ್ರತಿ ತಿಂಗಳು 50 ರೂ.ಗಳಿಗೆ ಹೆಚ್ಚಿಸುವುದು.

2. ಕೆಲವು ಪರಿಮಿತಿಗಳಿಗೊಳಪಟ್ಟು, ಉಚಿತ ವರ್ಗಾವಣೆ ರಹಿತ ಬಸ್‌ಪಾಸುಗಳನ್ನು ಒದಗಿಸುವುದು.

3. ಕೆಲವು ನಿರ್ಬಂಧಗಳಿಗೊಳಪಟ್ಟು ಉಚಿತ ವೈದ್ಯಕೀಯ ಸೌಲಭ್ಯಗಳನ್ನೂ ಸಹ ನೀಡುವುದು.

4. ಕುಟುಂಬ ಪಿಂಚಣಿಯನ್ನು ಪ್ರತಿ ತಿಂಗಳು 500 ರೂ.ಗಳಿಗೆ ಹೆಚ್ಚಿಸುವುದು.

ಸದಸ್ಯರುಗಳಿಗಾಗಿ,-

5. ಪ್ರತಿ ತಿಂಗಳು ನೀಡುವ 1,000 ರೂ.ಗಳ ಸಂಬಳದ ಜೊತೆಗೆ ದೂರವಾಣಿ ಕರೆ, ಅಂಚೆ ವೆಚ್ಚಗಳು, ಸಂಚಿತ ಭತ್ಯೆಗಳು ಮತ್ತು ಆಪ್ತ ಸಹಾಯಕನ ವೇತನ- ಇವುಗಳಿಗೆ ಸಂಬಂಧಿಸಿದಂತೆ ಸಂದಾಯ ಮಾಡತಕ್ಕ ಭತ್ಯೆಗಳನ್ನು 2,000 ರೂ.ಗಳಿಂದ 3,500 ರೂ.ಗಳಿಗೆ ಹೆಚ್ಚಿಸುವುದು.

6. ಸಭೆಗಳಲ್ಲಿ ಹಾಜರಾಗುವುದಕ್ಕಾಗಿ, ಪ್ರವಾಸ ಮಾಡಿದ ರೀತಿ ಯಾವುದೇ ಇರಲಿ ಪ್ರಯಾಣ ಭತ್ಯೆಯನ್ನು ಪ್ರತಿ ಕಿ.ಮೀ.ಗೆ 2 ರೂ.ಗಳ ದರದಲ್ಲಿ ನೀಡುವುದು.

7. ದಿನಭತ್ಯೆಯನ್ನು, ರಾಜ್ಯದೊಳಗಡೆ 100 ರೂ.ಗಳಿಗೆ ಮತ್ತು ಭಾರತದ ಒಳಗಡೆ ಹೊರ ರಾಜ್ಯಗಳಲ್ಲಿ 250 ರೂ.ಗಳಿಗೆ ಹೆಚ್ಚಿಸುವುದು.

8. ಕೆಲವು ಪರಿಮಿತಿಗಳಿಗೊಳಪಟ್ಟು ವರ್ಗಾವಣೆರಹಿತ ಉಚಿತ ಬಸ್‌ಪಾಸುಗಳನ್ನು ಒದಗಿಸುವುದು.

9. ಹಣಕಾಸು ವರ್ಷದಲ್ಲಿ ಗರಿಷ್ಠ ಹತ್ತು ಸಾವಿರ ರೂಪಾಯಿಗಳಿಗೊಳಪಟ್ಟು ವಿಮಾನ ಮತ್ತು ರೈಲ್ವೆ ಪ್ರವಾಸದ ವೆಚ್ಚವನ್ನು ಮರುಸಂದಾಯ ಮಾಡುವುದು.

ಸಂಸದೀಯ ಕಾರ್ಯನಿರ್ವಾಹಕರಿಗೆ,-

10. ಆತಿಥ್ಯ ಭತ್ಯೆಗಳನ್ನು ಶೇಕಡಾ ನೂರರಷ್ಟು ಹೆಚ್ಚಿಸುವುದು.

11. ಸುಸಜ್ಜಿತ ಮನೆಗೆ ಬದಲಾಗಿ ಮನೆ ಬಾಡಿಗೆ ಭತ್ಯೆಯನ್ನು 5,000 ರೂ.ಗಳಿಗೆ ಹೆಚ್ಚಿಸುವುದು.

12. ಎರಡು ಸಾವಿರ ರೂಪಾಯಿಗಳ ವಾಹನ ಭತ್ಯೆಗೆ ಬದಲಾಗಿ, ಪ್ರತಿ ತಿಂಗಳು ಮುನ್ನೂರು ಲೀಟರ್ ಪೆಟ್ರೋಲ್‌ಗೆ ಸಮನಾಗುವ ವೆಚ್ಚವನ್ನು ಭರಿಸುವುದು.

13. ಕರ್ನಾಟಕದ ಹೊರಗಡೆ ಮಾಡುವ ಪ್ರವಾಸಕ್ಕೆ ದಿನಭತ್ಯೆಯನ್ನು ಪ್ರತಿ ದಿನಕ್ಕೆ ಇನ್ನೂರ ಐವತ್ತು ರೂಪಾಯಿಗಳಿಗೆ ಹೆಚ್ಚಿಸುವುದು.

ಇತರ ಕೆಲವು ಆನುಷಂಗಿಕ ತಿದ್ದುಪಡಿಗಳನ್ನೂ ಸಹ ಮಾಡಲಾಗಿದೆ.

ಆದ್ದರಿಂದ ಈ ವಿಧೇಯಕ.

(1990ರ ಎಲ್‌ಎ ವಿಧೇಯಕ ಸಂಖ್ಯೆ 31 ರಿಂದ ಪಡೆಯಲಾಗಿದೆ. ಕಡತ ಎಲ್‌ಎಡಬ್ಲ್ಯು 50 ಎಲ್‌ಜಿಎನ್ 90)

## XXVI

1992ರ ತಿದ್ದುಪಡಿ ಮಾಡುವ ಅಧಿನಿಯಮ 16:- ಕರ್ನಾಟಕ ವಿಧಾನ ಮಂಡಲದ ಸಂಬಳಗಳು, ನಿವೃತ್ತಿ ವೇತನಗಳು ಮತ್ತು ಭತ್ಯೆಗಳ ಅಧಿನಿಯಮ, 1956ರ 12ನೇ ಪ್ರಕರಣದ (ಸಿಸಿ) ಖಂಡವು ಸದಸ್ಯರು ಮಾಡಿದ ಪ್ರವಾಸಗಳಿಗಾಗಿ ಹತ್ತು ಸಾವಿರ ರೂಪಾಯಿಗಳ ಗರಿಷ್ಠ ಮಿತಿಗೊಳಪಟ್ಟು ವಿಮಾನ ಅಥವಾ ರೈಲ್ವೆ ಪ್ರಯಾಣದ ದರವನ್ನು ಮರುಸಂದಾಯ ಮಾಡುವುದಕ್ಕೆ ಉಪಬಂಧ ಕಲ್ಪಿಸಿದೆ. ಅನಾನುಕೂಲತೆಯನ್ನು ತಪ್ಪಿಸಲು, ಹತ್ತುಸಾವಿರ ರೂಪಾಯಿಗಳನ್ನು ಎರಡು ಸಮಾನ ಕಂತುಗಳಲ್ಲಿ ಸಂದಾಯ ಮಾಡಲು ಸದರಿ ಉಪಬಂಧವನ್ನು ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

11ಎ ಪ್ರಕರಣದ ಮೇರೆಗೆ ನಿವೃತ್ತಿ ವೇತನವನ್ನು ಪಡೆಯಲು ಹಕ್ಕುಳ್ಳ ವ್ಯಕ್ತಿಗಳ, ವಿಧಾನಸಭೆ ಅಥವಾ ವಿಧಾನ ಪರಿಷತ್ತಿನ ಸದಸ್ಯರುಗಳಾಗಿ ಸೇವೆ ಸಲ್ಲಿಸುತ್ತಿರುವಾಗ ನಿಧನಹೊಂದಿದ ವ್ಯಕ್ತಿಗಳ ಕುಟುಂಬ ಹಾಗೂ ಅವರ ನಿಧನದ ತರುವಾಯ ಮೇಲೆ ಹೇಳಲಾದ ವ್ಯಕ್ತಿಗಳ ಕುಟುಂಬದವರ ಪ್ರಯೋಜನಕ್ಕಾಗಿ ಅಥವಾ ಕಲ್ಯಾಣಕ್ಕಾಗಿ ಕ್ಷೇಮನಿಧಿಯನ್ನು ಸ್ಥಾಪಿಸುವುದು ಅವಶ್ಯವೆಂದು ಪರಿಗಣಿಸಲಾಗಿದೆ. ಆದುದರಿಂದ ಸದರಿ ನಿಧಿಯನ್ನು ಸ್ಥಾಪಿಸಲು ಮತ್ತು ಇತರ ಆನುಷಂಗಿಕ ವಿಷಯಗಳಿಗಾಗಿ ಅಧಿನಿಯಮವನ್ನು ಸೂಕ್ತವಾಗಿ ತಿದ್ದುಪಡಿ ಮಾಡಲು ಉದ್ದೇಶಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(ಕರ್ನಾಟಕ ರಾಜ್ಯಪತ್ರದ (ವಿಶೇಷ ಸಂಚಿಕೆ) ಭಾಗ IV - 2ಎ, ದಿನಾಂಕ 26ನೇ ಮಾರ್ಚ್ 1992 ರಲ್ಲಿ, ಸಂಖ್ಯೆ 175, ಪುಟ 572 ಎಂದು ಪ್ರಕಟಿಸಲಾಗಿದೆ.)

## XXVII

1994ರ ತಿದ್ದುಪಡಿ ಮಾಡುವ ಅಧಿನಿಯಮ 5:- ಕರ್ನಾಟಕ ವಿಧಾನ ಮಂಡಲದ ಸಂಬಳಗಳು, ನಿವೃತ್ತಿ ವೇತನಗಳು ಮತ್ತು ಭತ್ಯೆಗಳ ಅಧಿನಿಯಮ, 1956ನ್ನು ತಿದ್ದುಪಡಿ ಮಾಡುವುದರ ಮೂಲಕ, ಕರ್ನಾಟಕ ವಿಧಾನ ಮಂಡಲದ ಸದಸ್ಯರುಗಳಿಗೆ, ವಿಧಾನ ಮಂಡಲದ ಪೀಠಾಸೀನ ಅಧಿಕಾರಿಗಳಿಗೆ ಮತ್ತು ಸಂಸದೀಯ ಕಾರ್ಯನಿರ್ವಾಹಕರಿಗೆ, ಸಂದಾಯ ಮಾಡತಕ್ಕ ಸಂಬಳಗಳು ಮತ್ತು ಇತರ ಭತ್ಯೆಗಳನ್ನು ಹೆಚ್ಚಿಸುವುದು ಅವಶ್ಯಕವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(1993ರ ಎಲ್‌ಎ ವಿಧೇಯಕದಿಂದ ಪಡೆಯಲಾಗಿದೆ. ಕಡತ ಸಂಖ್ಯೆ ಎಲ್‌ಎಡಬ್ಲ್ಯು 56, ಎಲ್‌ಜಿಎನ್ 93).

## XXVIII

1995ರ ತಿದ್ದುಪಡಿ ಮಾಡುವ ಅಧಿನಿಯಮ 11:- ಪ್ರತಿಯೊಬ್ಬ ಸದಸ್ಯ ಮತ್ತು ಆತನ ಸಹ ಸದಸ್ಯನಿಗೆ ಕರ್ನಾಟಕದ ಹೊರಗೆ ಕರ್ನಾಟಕ ರಸ್ತೆ ಸಾರಿಗೆ ನಿಗಮದ ಸಾರಿಗೆ ಸೇವೆಯಲ್ಲಿ ಪ್ರಯಾಣ ಮಾಡಲು ಒಂದು ವರ್ಗಾವಣೆ ರಹಿತ ಉಚಿತ ಪಾಸನ್ನು ಒದಗಿಸಲು ಕರ್ನಾಟಕ ವಿಧಾನ ಮಂಡಲದ ಸಂಬಳಗಳು, ನಿವೃತ್ತಿ ವೇತನಗಳು ಮತ್ತು ಭತ್ಯೆಗಳ ಅಧಿನಿಯಮ, 1956ರ 12ನೇ ಪ್ರಕರಣದ (ಸಿಸಿ) ಖಂಡದಲ್ಲಿ ಉಪಬಂಧ ಕಲ್ಪಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(1995ರ ಎಲ್‌ಎ ವಿಧೇಯಕ ಸಂಖ್ಯೆ 13 ರಿಂದ ಪಡೆಯಲಾಗಿದೆ. ಕಡತ ಎಲ್‌ಎಡಬ್ಲ್ಯು 19 ಎಲ್‌ಜಿಎನ್ 95).

## XXIX

1997ರ ತಿದ್ದುಪಡಿ ಮಾಡುವ ಅಧಿನಿಯಮ 4:- ಮಾಜಿ ಸದಸ್ಯರುಗಳು, ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ ಬಸ್ಸುಗಳಲ್ಲಿ ರಾಜ್ಯದೊಳಗೆ ಒಂದು ವರ್ಷದಲ್ಲಿ ಹನ್ನೆರಡು ಬಾರಿ ಪ್ರಯಾಣ ಮಾಡುವುದರ ಬದಲು ಎಷ್ಟು ಸಾರಿಯಾದರೂ ಪ್ರಯಾಣ ಮಾಡಲು

ಕರ್ನಾಟಕ ವಿಧಾನ ಮಂಡಲದ ಸಂಬಳಗಳು, ನಿವೃತ್ತಿ ವೇತನಗಳು ಮತ್ತು ಭತ್ಯೆಗಳ ಅಧಿನಿಯಮ, 1956ನ್ನು ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಕರ್ನಾಟಕ ವಿಧಾನ ಮಂಡಲದ ಸಂಬಳಗಳು, ನಿವೃತ್ತಿ ವೇತನಗಳು ಮತ್ತು ಭತ್ಯೆಗಳ (ತಿದ್ದುಪಡಿ) ಅಧ್ಯಾದೇಶ, 1996 (1996ರ ಕರ್ನಾಟಕ ಅಧ್ಯಾದೇಶ 4) ಕ್ಕೆ ಬದಲಾಗಿ ಈ ವಿಧೇಯಕವನ್ನು ಮಂಡಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(ಅಧಿಸೂಚನೆ ಕ್ರಮಾಂಕ ಎಲ್‌ಜಿಎ/ಬಿಎಲ್‌ಎ/ 29/ 1997, ದಿನಾಂಕ 19.02.1997, ಕರ್ನಾಟಕ ರಾಜ್ಯಪತ್ರದ (ವಿಶೇಷ ಸಂಚಿಕೆ) ಭಾಗ IV- 2ಎ, ದಿನಾಂಕ 19.02.1997 ರಲ್ಲಿ, ಸಂಖ್ಯೆ 299, ಪುಟ 3 ಎಂದು ಪ್ರಕಟಿಸಲಾಗಿದೆ.)

## XXX

1997ರ ತಿದ್ದುಪಡಿ ಮಾಡುವ ಅಧಿನಿಯಮ 19: ಕರ್ನಾಟಕ ವಿಧಾನ ಮಂಡಲದ ಸಂಬಳಗಳು, ನಿವೃತ್ತಿ ವೇತನಗಳು ಮತ್ತು ಭತ್ಯೆಗಳ ಅಧಿನಿಯಮ, 1956ನ್ನು ತಿದ್ದುಪಡಿ ಮಾಡುವುದರ ಮೂಲಕ, ಸಂಸದೀಯ ಕಾರ್ಯನಿರ್ವಾಹಕರು ಮತ್ತು ಶಾಸಕರ ಸಂಬಳಗಳು ಹಾಗೂ ಭತ್ಯೆಗಳನ್ನು ಹೆಚ್ಚಿಸುವುದು ಮತ್ತು ಮಾಜಿ ಶಾಸಕರಿಗೆ ಕೆಲವು ಇತರ ಪ್ರಯೋಜನಗಳನ್ನು ನೀಡುವುದು ಮತ್ತು ಸಂದಾಯ ಮಾಡತಕ್ಕ ನಿವೃತ್ತಿ ವೇತನವನ್ನು ಹೆಚ್ಚಿಸುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(1997ರ ಎಲ್‌ಎ ವಿಧೇಯಕ ಸಂಖ್ಯೆ 37 ರಿಂದ ಪಡೆಯಲಾಗಿದೆ. ಕಡತ ಡಿಪಿಎಎಲ್ 52 ಶಾಸನ 97).

## XXXI

1998ರ ತಿದ್ದುಪಡಿ ಮಾಡುವ ಅಧಿನಿಯಮ 30:- ಕರ್ನಾಟಕ ವಿಧಾನ ಮಂಡಲವನ್ನು, ವಿಧಾನಸಭಾ ಸಚಿವಾಲಯ ಮತ್ತು ವಿಧಾನ ಪರಿಷತ್ತು ಸಚಿವಾಲಯವನ್ನಾಗಿ ವಿಭಜಿಸಿದ ಕಾರಣದಿಂದ, ಪ್ರತಿಯೊಂದು ಸಚಿವಾಲಯಕ್ಕೆ ಪ್ರತ್ಯೇಕ ಕ್ಷೇಮನಿಧಿ ಪ್ರಾಧಿಕಾರವನ್ನು ಸ್ಥಾಪಿಸಲು ಕರ್ನಾಟಕ ವಿಧಾನ ಮಂಡಲ ಸಂಬಳಗಳು, ನಿವೃತ್ತಿ ವೇತನಗಳು ಮತ್ತು ಭತ್ಯೆಗಳ ಅಧಿನಿಯಮ, 1956ರ 13ಸಿ ಪ್ರಕರಣವನ್ನು ತಿದ್ದುಪಡಿ ಮಾಡುವುದು ಅವಶ್ಯವೆಂದು ಭಾವಿಸಲಾಗಿದೆ.

ಆದ್ದರಿಂದ ಈ ವಿಧೆಯಕ.

(ಕರ್ನಾಟಕ ರಾಜ್ಯಪತ್ರದ (ವಿಶೇಷ ಸಂಚಿಕೆ) ಭಾಗ IV-2ಎ, ಸಂಖ್ಯೆ 1207, ದಿನಾಂಕ 10.11.1998 ರಲ್ಲಿ, ಪುಟ 3 ಎಂದು ಪ್ರಕಟಿಸಲಾಗಿದೆ.)

## XXXII

2001ರ ತಿದ್ದುಪಡಿ ಮಾಡುವ ಅಧಿನಿಯಮ 14:- ಕರ್ನಾಟಕ ವಿಧಾನ ಮಂಡಲದ ಸಂಬಳಗಳು, ನಿವೃತ್ತಿ ವೇತನಗಳು ಮತ್ತು ಭತ್ಯೆಗಳ ಅಧಿನಿಯಮ, 1956ನ್ನು ತಿದ್ದುಪಡಿ ಮಾಡುವುದರ ಮೂಲಕ, ಸಂಸದೀಯ ಕಾರ್ಯನಿರ್ವಾಹಕರು ಮತ್ತು ಶಾಸಕರ ಸಂಬಳಗಳು ಹಾಗೂ ಭತ್ಯೆಗಳನ್ನು ಮತ್ತು ಮಾಜಿ ಶಾಸಕರಿಗೆ ಇತರ ಕೆಲವು ಪ್ರಯೋಜನಗಳನ್ನು ನೀಡುವುದು ಮತ್ತು ಸಂದಾಯ ಮಾಡತಕ್ಕ ನಿವೃತ್ತಿ ವೇತನವನ್ನು ಹೆಚ್ಚಿಸುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(2000ದ ಎಲ್.ಎ. ವಿಧೇಯಕ ಸಂಖ್ಯೆ 43, ಕಡತ ಸಂಖ್ಯೆ ಸಂವ್ಯಶಾಇ 56 ಶಾಸನ 2000ನ್ನು ನೋಡಿ)

## XXXIII

2002ರ ತಿದ್ದುಪಡಿ ಮಾಡುವ ಅಧಿನಿಯಮ:- ಈ ಮುಂದಿನ ಉದ್ದೇಶಗಳಿಗಾಗಿ ಕರ್ನಾಟಕ ವಿಧಾನ ಮಂಡಲದ ಸಂಬಳಗಳು, ನಿವೃತ್ತಿ ವೇತನಗಳು ಮತ್ತು ಭತ್ಯೆಗಳ ಅಧಿನಿಯಮ, 1956ನ್ನು (1957ರ ಕರ್ನಾಟಕ ಅಧಿನಿಯಮ 2) ತಿದ್ದುಪಡಿ ಮಾಡುವುದು ಅವಶ್ಯಕವೆಂದು ಪರಿಗಣಿಸಲಾಗಿದೆ, ಎಂದರೆ:-

(ಎ) ಅವರಿಗೆ ಒದಗಿಸಲಾಗಿರುವ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮದ ಬಸ್ ಪಾಸ್‌ಗಳಿಗೆ ಬದಲಾಗಿ ಚುನಾವಣಾ ಕ್ಷೇತ್ರದ ಪ್ರಯಾಣ ಭತ್ಯೆಯಾಗಿ ಪ್ರತಿ ವರ್ಷಕ್ಕೆ ಹತ್ತು ಸಾವಿರ ರೂಪಾಯಿಗಳನ್ನು ಮಂಜೂರು ಮಾಡುವುದು; ಮತ್ತು

(ಬಿ) ದೂರವಾಣಿ ಕರೆಗಳ ಸಂಬಂಧದಲ್ಲಿಯ ವೆಚ್ಚವನ್ನು ಭರಿಸುವುದಕ್ಕಾಗಿ ಹಣ ಸಂದಾಯದ ಮೊತ್ತವನ್ನು ಪ್ರತಿ ತಿಂಗಳಿಗೆ ಐದು ಸಾವಿರ ರೂಪಾಯಿಗಳಿಂದ ಆರು ಸಾವಿರದ ಐದುನೂರು ರೂಪಾಯಿಗಳವರೆಗೆ ಹೆಚ್ಚಿಸುವುದು ಮತ್ತು ಓ.ಎಮ್. ಸಂಖ್ಯೆ: ಎಡಿಎಮ್-1/73/ಎಲ್‌ಜಿ/98 ದಿನಾಂಕ: 31.12.1998ರ ಪ್ರಕಾರ ಎರಡು ತಿಂಗಳಿಗೊಮ್ಮೆ 3000 ಸ್ಥಳೀಯ ಕರೆಗಳ ವೆಚ್ಚದ ಮೊಬಲಗನ್ನು ಮರುಭರ್ತಿ ಮಾಡುವ ಈಗ ಇರುವ ಪದ್ಧತಿಯನ್ನು ರದ್ದುಪಡಿಸುವುದು.

ಆದ್ದರಿಂದ ಈ ವಿಧೇಯಕ.

# 1957ರ [1][ಕರ್ನಾಟಕ][1] ಅಧಿನಿಯಮ ಸಂಖ್ಯೆ 2

(1957ರ ಜನವರಿ ಇಪ್ಪತ್ತಾಲ್ಕನೇ ದಿನದಂದು [1][ಕರ್ನಾಟಕ ರಾಜ್ಯಪತ್ರ][1]ದಲ್ಲಿ ಮೊದಲು ಪ್ರಕಟಿಸಲಾಯಿತು)

# [1][ಕರ್ನಾಟಕ ವಿಧಾನ ಮಂಡಲ][1]ದ ಸಂಬಳಗಳು, [2][ನಿವೃತ್ತಿ ವೇತನಗಳು ಮತ್ತು ಭತ್ಯೆಗಳ][2] ಅಧಿನಿಯಮ, 1956

(1957ರ ಜನವರಿ ಹದಿನೈದನೇ ದಿನದಂದು ರಾಜ್ಯಪಾಲರ ಒಪ್ಪಿಗೆ ಪಡೆಯಲಾಗಿದೆ)

(1957ರ 17, 1957ರ 27, 1959ರ 12, 1960ರ 10, 1967ರ 8, 1968ರ 18, 1969ರ 15, 1974ರ 19, 1975ರ 3, 1976ರ 13, 1976ರ 49, 1976ರ 72, 1978ರ 31, 1979ರ 5, 1979ರ 31, 1981ರ 26, 1982ರ 21, 1984ರ 22, 1985ರ 14, 1985ರ 24, 1985ರ 38, 1987ರ 16, 1988ರ 9, 1991ರ 5, 1992ರ 16, 1994ರ 5, 1995ರ 11, 1997ರ 4, 1997ರ 19 1998ರ 30, 2001ರ 14, ಮತ್ತು 2004ರ 1- ಈ ಅಧಿನಿಯಮಗಳ ಮೂಲಕ ತಿದ್ದುಪಡಿಮಾಡಲಾದಂತೆ.)

**ಸಭಾಪತಿ, ಉಪ-ಸಭಾಪತಿ, ಸಭಾಧ್ಯಕ್ಷ, ಉಪ-ಸಭಾಧ್ಯಕ್ಷ, [3][ವಿರೋಧ ಪಕ್ಷದ ನಾಯಕರು ಮತ್ತು ಸರ್ಕಾರದ ಮುಖ್ಯ ಸಚೇತಕ][3] ಮತ್ತು ವಿಧಾನ ಸಭೆ ಹಾಗೂ ವಿಧಾನ ಪರಿಷತ್ತಿನ ಸದಸ್ಯರ [4][ಸಂಬಳಗಳು, ನಿವೃತ್ತಿ ವೇತನಗಳು ಮತ್ತು ಭತ್ಯೆಗಳ][4] ಸಂಬಂಧದಲ್ಲಿ ಉಪಬಂಧ ಕಲ್ಪಿಸಲು ಅಧಿನಿಯಮ.**

ಸಭಾಪತಿ ಮತ್ತು ಉಪ-ಸಭಾಪತಿ, ಸಭಾಧ್ಯಕ್ಷ ಮತ್ತು ಉಪ-ಸಭಾಧ್ಯಕ್ಷ, [3][ವಿರೋಧ ಪಕ್ಷದ ನಾಯಕ, ಸರ್ಕಾರದ ಮುಖ್ಯ **ಸಚೇತಕ**][3] ಮತ್ತು [1][ಕರ್ನಾಟಕ ರಾಜ್ಯ][1]ದ ವಿಧಾನಸಭೆ ಮತ್ತು ವಿಧಾನ ಪರಿಷತ್ತಿನ ಸದಸ್ಯರ [4][ಸಂಬಳಗಳು, ನಿವೃತ್ತಿ ವೇತನಗಳು ಮತ್ತು ಭತ್ಯೆಗಳು][4] ಹಾಗೂ ಇತರ ಕೆಲವು ವಿಷಯಗಳ ಸಂಬಂಧದಲ್ಲಿ ಉಪಬಂಧ ಕಲ್ಪಿಸುವುದು ವಿಹಿತವಾಗಿರುವುದರಿಂದ;

ಭಾರತ ಗಣರಾಜ್ಯದ ಏಳನೇ ವರ್ಷದಲ್ಲಿ [1][ಕರ್ನಾಟಕ ರಾಜ್ಯ][1] ವಿಧಾನ ಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು:-

**1. ಚಿಕ್ಕ ಹೆಸರು ಮತ್ತು ಪ್ರಾರಂಭ-** (1) ಈ ಅಧಿನಿಯಮವನ್ನು [1][ಕರ್ನಾಟಕ ವಿಧಾನ ಮಂಡಲ][1]ದ ಸಂಬಳಗಳು, [2][ನಿವೃತ್ತಿ ವೇತನಗಳು ಮತ್ತು ಭತ್ಯೆಗಳ][2] ಅಧಿನಿಯಮ, 1956 ಎಂದು ಕರೆಯತಕ್ಕದ್ದು.

(2) ಇದು 1956ರ ನವೆಂಬರ್ ಮೊದಲನೇ ದಿನದಿಂದ ಜಾರಿಗೆ ಬಂದಿರುವುದಾಗಿ ಭಾವಿಸತಕ್ಕದ್ದು.

**2. ಪರಿಭಾಷೆಗಳು:-** ಈ ಅಧಿನಿಯಮದಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,-

(ಎ) 'ಸಭಾಪತಿ' ಎಂದರೆ ವಿಧಾನ ಪರಿಷತ್ತಿನ ಸಭಾಪತಿ [5][* * * * * *][5]

(ಬಿ) 'ಉಪ-ಸಭಾಪತಿ' ಎಂದರೆ ವಿಧಾನ ಪರಿಷತ್ತಿನ ಉಪ-ಸಭಾಪತಿ;

[3][(ಬಿಬಿ) 'ಸರ್ಕಾರದ ಮುಖ್ಯ ಸಚೇತಕ' ಎಂದರೆ, ವಿಧಾನಸಭೆ, ವಿಧಾನ ಪರಿಷತ್ತಿನಲ್ಲಿ ಸರ್ಕಾರದ ಮುಖ್ಯ ಸಚೇತಕನೆಂದು ಮುಖ್ಯಮಂತ್ರಿಗಳು ನಾಮ ನಿರ್ದೇಶನ ಮಾಡಿದ ವಿಧಾನಸಭೆ ಅಥವಾ ವಿಧಾನ ಪರಿಷತ್ತಿನ ಸದಸ್ಯ;][3]

(ಸಿ) ರೈಲು ಪ್ರಯಾಣಗಳಿಗೆ ಸಂಬಂಧಿಸಿದಂತೆ 'ಅತ್ಯುನ್ನತ ದರ್ಜೆ' ಎಂಬುದು ರೈಲಿನಲ್ಲಿ ಲಭ್ಯವಿರುವ ಹವಾನಿಯಂತ್ರಿತ ಸ್ಥಳಾವಕಾಶವನ್ನು ಒಳಗೊಳ್ಳುತ್ತದೆ;

[3][(ಸಿಸಿ) 'ವಿರೋಧ ಪಕ್ಷದ ನಾಯಕ' ಎಂದರೆ, ಸಂದರ್ಭಾನುಸಾರ ಸಭಾಧ್ಯಕ್ಷ ಅಥವಾ ಸಭಾಪತಿ, ವಿರೋಧ ಪಕ್ಷದ ನಾಯಕ ಎಂದು ತತ್ಕಾಲದಲ್ಲಿ ಮನ್ನಣೆ ನೀಡಿದ ವಿಧಾನ ಸಭೆ ಅಥವಾ ವಿಧಾನ ಪರಿಷತ್ತಿನ ಸದಸ್ಯ;][3]

(ಡಿ) 'ನಿಯಮಿಸಲಾದುದು' ಎಂದರೆ ಈ ಅಧಿನಿಯಮದ ಮೇರೆಗೆ ರಚಿಸಿದ ನಿಯಮಗಳ ಮೂಲಕ ನಿಯಮಿಸಲಾದುದು;

(ಇ) 'ವಾಸದಮನೆ' ಯು ಸಿಬ್ಬಂದಿ ವಸತಿಗಳು ಮತ್ತು ಅದಕ್ಕೆ ಲಗತ್ತಾದ ಕಟ್ಟಡಗಳು ಮತ್ತು ತೋಟಗಳನ್ನು ಒಳಗೊಳ್ಳುತ್ತದೆ;

(ಎಫ್) 'ಸಭಾಧ್ಯಕ್ಷ' ಎಂದರೆ ವಿಧಾನ ಸಭೆಯ ಸಭಾಧ್ಯಕ್ಷ[5][XXX][5];

(ಜಿ) 'ಉಪ-ಸಭಾಧ್ಯಕ್ಷ' ಎಂದರೆ ವಿಧಾನ ಸಭೆಯ ಉಪ-ಸಭಾಧ್ಯಕ್ಷ.

1.1973ರ ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶದ ಮೂಲಕ 1-11-1973 ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.
2.1979ರ ಅಧಿನಿಯಮ ಸಂಖ್ಯೆ 5ರ ಮೂಲಕ 27-12-1978 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
3.1976ರ ಅಧಿನಿಯಮ ಸಂಖ್ಯೆ 72ರ ಮೂಲಕ 19-7-1976 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
4.1978ರ ಅಧಿನಿಯಮ ಸಂಖ್ಯೆ 31ರ ಮೂಲಕ 26-12-1978 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
5. 1968ರ ಅಧಿನಿಯಮ ಸಂಖ್ಯೆ 18ರ ಮೂಲಕ 24ನೇ ಅಕ್ಟೋಬರ್ 1968ರಿಂದ ಜಾರಿಗೆ ಬರುವಂತೆ ಬಿಟ್ಟು ಬಿಡಲಾಗಿದೆ.

**3. ಸಭಾಪತಿ ಮತ್ತು ಸಭಾಧ್ಯಕ್ಷರ ಸಂಬಳಗಳು ಮತ್ತು ಆತಿಥ್ಯ ಭತ್ಯೆಗಳು:-** (1) ಸಭಾಪತಿಗೆ ಒಂದು ತಿಂಗಳಿಗೆ [1][ಆರು ಸಾವಿರ ರೂಪಾಯಿಗಳ][1] ಸಂಬಳ ಮತ್ತು ಒಂದು ವರ್ಷಕ್ಕೆ [1][ಎಪ್ಪತ್ತು ಸಾವಿರ ರೂಪಾಯಿಗಳ][1] ಆತಿಥ್ಯ ಭತ್ಯೆಯನ್ನು ಸಂದಾಯ ಮಾಡತಕ್ಕದ್ದು.

(2) ಸಭಾಧ್ಯಕ್ಷರಿಗೆ ಒಂದು ತಿಂಗಳಿಗೆ [1][ಆರು ಸಾವಿರ ರೂಪಾಯಿಗಳ ಸಂಬಳ ಮತ್ತು ಒಂದು ವರ್ಷಕ್ಕೆ ಎಪ್ಪತ್ತು ಸಾವಿರ ರೂಪಾಯಿಗಳ][1] ಆತಿಥ್ಯ ಭತ್ಯೆಯನ್ನು ಸಂದಾಯ ಮಾಡತಕ್ಕದ್ದು.

**4. ಸಭಾಪತಿ ಮತ್ತು ಸಭಾಧ್ಯಕ್ಷರ ವಾಸದ ಮನೆಗಳು:-** (1) ಸಭಾಪತಿ ಮತ್ತು ಸಭಾಧ್ಯಕ್ಷರು ಪ್ರತಿಯೊಬ್ಬರು ತಮ್ಮ ಅಧಿಕಾರದ ಅವಧಿ ಪೂರ್ತಿ ಮತ್ತು ಅದರ ನಿಕಟ ತರುವಾಯದ [2][ಅರವತ್ತು ದಿವಸಗಳ][2] ಅವಧಿಯ ಕಾಲ ಬೆಂಗಳೂರು ನಗರ [3][ಅಥವಾ ಬೆಂಗಳೂರು ನಗರದ ಪರಿಮಿತಿಗಳಿಂದ ಮೂವತ್ತು ಕಿಲೋಮೀಟರ್ ಒಳಗೆ][3] ಒಂದು ಸುಸಜ್ಜಿತ ಮನೆಯನ್ನು ಬಾಡಿಗೆ ಸಂದಾಯಮಾಡದೆ ಬಳಸಲು ಹಕ್ಕುಳ್ಳವರಾಗಿರತಕ್ಕದ್ದು [4][XXX][4] ಅಥವಾ ಅಂಥ ಸುಸಜ್ಜಿತ ಮನೆಗೆ ಬದಲಾಗಿ ತಿಂಗಳಿಗೆ [5][ಹತ್ತು ಸಾವಿರ ರೂಪಾಯಿಗಳ][5] ದರದಲ್ಲಿ ಮನೆ ಬಾಡಿಗೆ ಭತ್ಯಕ್ಕೆ ಹಕ್ಕುಳ್ಳವರಾಗಿರತಕ್ಕದ್ದು. [6][ಈ ಉಪ-ಪ್ರಕರಣದ ಮೇರೆಗೆ ಒದಗಿಸಿದ ವಾಸದ ಮನೆಯನ್ನು ನಿಯಮಿಸಲಾದಂಥ ಶ್ರೇಣಿಗಳಲ್ಲಿ ಸುಸಜ್ಜಿತ ಗೊಳಿಸತಕ್ಕದ್ದು ಮತ್ತು ಅದರ ಪ್ಲಿಂತ್ ವಿಸ್ತೀರ್ಣವು ನಿಯಮಿಸಲಾದಂಥ ಮಿತಿಗಳನ್ನು ಮೀರತಕ್ಕದ್ದಲ್ಲ.][6]

(2) ಸುಸಜ್ಜಿತ ವಾಸದ ಮನೆಗೆ ಬದಲಾಗಿ ಮನೆ ಬಾಡಿಗೆ ಭತ್ಯಕ್ಕೆ ಹಕ್ಕುಳ್ಳವರಾದ ಸಭಾಪತಿ ಅಥವಾ ಸಭಾಧ್ಯಕ್ಷರು ಬಳಸುವ ವಾಸದ ಮನೆಯಲ್ಲಿ, ಸರ್ಕಾರಿ ಉದ್ದೇಶಕ್ಕೆ ಉಪಯೋಗಿಸಲು ನಿಯಮಿಸಬಹುದಾದಂಥ ಶ್ರೇಣಿಯಲ್ಲಿ ರಾಜ್ಯ ಸರ್ಕಾರವು ಮೂರು ಕೊಠಡಿಗಳನ್ನು ಸುಸಜ್ಜಿತಗೊಳಿಸತಕ್ಕದ್ದು [3][ನಿವಾಸದ ನಿರ್ವಹಣೆ ಹಾಗೂ ಅದನ್ನು ಉತ್ತಮವಾಗಿ ಇಟ್ಟುಕೊಳ್ಳಲು ಮತ್ತು ಆ ಮನೆಗೆ ಸೇರಿದ ತೋಟದ ರೂಪುರೇಷೆ ಹಾಗೂ ನಿರ್ವಹಣೆಗಾಗಿ ತಿಂಗಳಿಗೆ ಐದು ಸಾವಿರ ರೂಪಾಯಿಗಳ ಭತ್ಯಕ್ಕೆ ಅವರು ಹಕ್ಕುಳ್ಳವರಾಗಿರತಕ್ಕದ್ದು.][3]

**5. ಸಭಾಪತಿ ಮತ್ತು ಸಭಾಧ್ಯಕ್ಷರ ವಾಹನ ಸೌಲಭ್ಯ:-** (1) ರಾಜ್ಯ ಸರ್ಕಾರವು ಸಭಾಪತಿ ಮತ್ತು ಸಭಾಧ್ಯಕ್ಷರುಗಳಿಗೆ ಸಂಬಂಧಿಸಿದಂತೆ, ಪ್ರತಿಯೊಬ್ಬರಿಗೂ ಅವರ ಬಳಕೆಗಾಗಿ ಒಂದು ಸೂಕ್ತ ಮೋಟಾರು ಕಾರನ್ನು ಒದಗಿಸಬಹುದು.

(2) ಸಭಾಪತಿ ಮತ್ತು ಸಭಾಧ್ಯಕ್ಷರಿಗೆ ಸರ್ಕಾರವು ಪ್ರತಿ ತಿಂಗಳು [7][ಐದು ನೂರು ಲೀಟರ್ ಪೆಟ್ರೋಲ್][7] ದರಗಳ [8][ವೆಚ್ಚಕ್ಕೆ ಸಮನಾದ][8] ವಾಹನ ಭತ್ಯೆಯನ್ನು ಪ್ರತಿಯೊಬ್ಬರಿಗೂ ಸಂದಾಯ ಮಾಡತಕ್ಕದ್ದು.

**6. ಸಭಾಪತಿ ಮತ್ತು ಸಭಾಧ್ಯಕ್ಷರು ಹಾಗೂ ಸರ್ಕಾರ ಸಂದಾಯ ಮಾಡಬೇಕಾದ ವೆಚ್ಚಗಳು:-** (1) ಸಭಾಪತಿ ಮತ್ತು ಸಭಾಧ್ಯಕ್ಷರು 4ನೇ ಪ್ರಕರಣದ (1)ನೇ ಉಪ-ಪ್ರಕರಣದ ಮತ್ತು 5ನೇ ಪ್ರಕರಣದ ಮೇರೆಗೆ ಅವರ ಬಳಕೆಗಾಗಿ ಹಂಚಿಕೆ ಮಾಡಲಾದ ವಾಸದ ಮನೆ ಮತ್ತು ಮೋಟಾರು ಕಾರುಗಳ ಸಂಬಂಧದಲ್ಲಿ ಈ ಮುಂದಿನ ವೆಚ್ಚಗಳನ್ನು ಸಂದಾಯ ಮಾಡಲು ಬದ್ಧರಾಗಿರತಕ್ಕದ್ದು, ಎಂದರೆ:-

[8][(ಎ) ಸರ್ಕಾರವು ಸಂದಾಯ ಮಾಡಿದ [7][ಐದುನೂರು ಲೀಟರ್ ಪೆಟ್ರೋಲ್][7] ವೆಚ್ಚಕ್ಕಿಂತ ಹೆಚ್ಚಾಗಿ ತಮ್ಮ ಮೋಟಾರು ಕಾರುಗಳಿಗೆ ಬಳಸಿದ ಪೆಟ್ರೋಲ್ ವೆಚ್ಚ; ಮತ್ತು][8]

[2][(ಬಿ) ವಾಸದ ಮನೆಯಲ್ಲಿ ವಿದ್ಯುಚ್ಛಕ್ತಿ ಮತ್ತು ನೀರು ಬಳಕೆಗಾಗಿ ಅವೆರಡರ ಒಟ್ಟು ಮಾಸಿಕ ದರದ ಮೊದಲ ಇನ್ನೂರು ರೂಪಾಯಿಗಳು.][2]

(2) 4ನೇ ಪ್ರಕರಣದ (1)ನೇ ಉಪ-ಪ್ರಕರಣದ ಮೇರೆಗೆ ಒದಗಿಸಿದ ವಾಸದ ಮನೆ ಮತ್ತು 5ನೇ ಪ್ರಕರಣದ ಮೇರೆಗೆ ಒದಗಿಸಿದ ಮೋಟಾರು ಕಾರು ಇವುಗಳ ದುರಸ್ತಿ ಖರ್ಚು ಸೇರಿದಂತೆ ಅವುಗಳ ನಿರ್ವಹಣೆ ಹಾಗೂ ಸುಸ್ಥಿತಿಗಾಗಿನ ಎಲ್ಲಾ ಇತರ ವೆಚ್ಚಗಳು, ಅಂಥ ಮೋಟಾರು ಕಾರುಗಳ ಚಾಲಕರು ಮತ್ತು ಕ್ಲೀನರ್‌ಗಳ ಸಂಬಳಗಳು ಮತ್ತು ಭತ್ಯೆಗಳು ಮತ್ತು ದರಗಳು ಮತ್ತು ತೆರಿಗೆಗಳು ಹಾಗೂ ಅಂಥ ವಾಸದ ಮನೆಗಳಿಗೆ ಸೇರಿದ ತೋಟಗಳ ರೂಪರೇಷೆ ಮತ್ತು ಅದರ ನಿರ್ವಹಣೆಗಾಗಿನ ಎಲ್ಲಾ ವೆಚ್ಚಗಳು

- ಇವುಗಳನ್ನು ರಾಜ್ಯ ಸರ್ಕಾರವು ಭರಿಸತಕ್ಕದ್ದು.

---

1. 2001ರ ಅಧಿನಿಯಮ ಸಂಖ್ಯೆ 14ರ ಮೂಲಕ 1ನೇ ಡಿಸೆಂಬರ್ 2000 ದಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
2. 1978ರ ಅಧಿನಿಯಮ ಸಂಖ್ಯೆ 31ರ ಮೂಲಕ 23ನೇ ಮಾರ್ಚ್ 1972 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
3. 1994ರ ಅಧಿನಿಯಮ ಸಂಖ್ಯೆ 5ರ ಮೂಲಕ 1ನೇ ಸೆಪ್ಟೆಂಬರ್ 1993 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
4. 1978ರ ಅಧಿನಿಯಮ ಸಂಖ್ಯೆ 31ರ ಮೂಲಕ 23ನೇ ಮಾರ್ಚ್ 1972 ರಿಂದ ಜಾರಿಗೆ ಬರುವಂತೆ ಬಿಟ್ಟು ಬಿಡಲಾಗಿದೆ.
5. 2001ರ ಅಧಿನಿಯಮ ಸಂಖ್ಯೆ 14ರ ಮೂಲಕ 1ನೇ ಡಿಸೆಂಬರ್ 2000 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
6. 1979ರ ಅಧಿನಿಯಮ ಸಂಖ್ಯೆ 5ರ ಮೂಲಕ 27ನೇ ಡಿಸೆಂಬರ್ 1978 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
7. 1994ರ ಅಧಿನಿಯಮ ಸಂಖ್ಯೆ 5ರ ಮೂಲಕ 1ನೇ ಸೆಪ್ಟೆಂಬರ್ 1993 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
8. 1991ರ ಅಧಿನಿಯಮ ಸಂಖ್ಯೆ 5ರ ಮೂಲಕ 1ನೇ ನವೆಂಬರ್ 1990 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**7. ಸಭಾಪತಿ ಮತ್ತು ಸಭಾಧ್ಯಕ್ಷರು ಅಧಿಕಾರ ವಹಿಸಿಕೊಂಡ ಮೇಲೆ ಅಥವಾ ಅಧಿಕಾರ ತ್ಯಜಿಸಿದ ಮೇಲೆ ಪಡೆಯುವ ಪ್ರಯಾಣ ಭತ್ಯೆಗಳು:-** ಸಭಾಪತಿ ಮತ್ತು ಸಭಾಧ್ಯಕ್ಷರು,-

(ಎ) ರಾಜ್ಯದಲ್ಲಿನ ತಮ್ಮ ಸಾಮಾನ್ಯ ವಾಸಸ್ಥಳದಿಂದ, ಅದು ಸದರಿ ನಗರದ ಹೊರಗಡೆ ಇದ್ದರೆ, ಬೆಂಗಳೂರು ನಗರದಲ್ಲಿ ಅಧಿಕಾರ ವಹಿಸಿಕೊಳ್ಳುವ ಸಂಬಂಧದಲ್ಲಿನ ಪ್ರಯಾಣಕ್ಕಾಗಿ; ಮತ್ತು

(ಬಿ) ಅವರು ಅಧಿಕಾರವನ್ನು ವಹಿಸಿಕೊಳ್ಳುವ ಮೊದಲು ರಾಜ್ಯದಲ್ಲಿನ ಅವರ ಸಾಮಾನ್ಯ ವಾಸಸ್ಥಳಕ್ಕೆ ಅಂಥ ಸ್ಥಳವು ಸದರಿ ನಗರದ ಹೊರಗಡೆ ಇದ್ದರೆ ಬೆಂಗಳೂರು ನಗರದಲ್ಲಿ ಅಧಿಕಾರ ತ್ಯಜಿಸಿದ ಸಂಬಂಧದ ಪ್ರಯಾಣಕ್ಕಾಗಿ

ತಮಗೆ ಮತ್ತು ತಮ್ಮ ಕುಟುಂಬದ ಸದಸ್ಯರುಗಳ ಹಾಗೂ ತಮ್ಮ ವೈಯಕ್ತಿಕ ಸಾಮಾನುಗಳನ್ನು ಸಾಗಿಸುವುದಕ್ಕೆ ಈ ಮುಂದೆ ನಿರ್ದಿಷ್ಟಪಡಿಸಿದ ದರಗಳಲ್ಲಿ ಪ್ರಯಾಣ ಭತ್ಯಕ್ಕೆ ಹಕ್ಕುಳ್ಳವರಾಗಿರತಕ್ಕದ್ದು, ಎಂದರೆ,-

(i) ಪ್ರಯಾಣವನ್ನು ರೈಲಿನಲ್ಲಿ ಮಾಡಿರಲಿ ಅಥವಾ ರಸ್ತೆಯ ಮೂಲಕ ಮಾಡಿರಲಿ ಅಥವಾ ಅವೆರಡರ ಮೂಲಕ ಮಾಡಿರಲಿ, ಸಭಾಪತಿ ಮತ್ತು ಸಭಾಧ್ಯಕ್ಷರು ತಮಗಾಗಿ ಮತ್ತು ತಮ್ಮ ಕುಟುಂಬದ ಸದಸ್ಯರಿಗಾಗಿ ಮಾಡಿದ ವಾಸ್ತವಿಕ ವೆಚ್ಚಗಳು;

(ii) ರಸ್ತೆ ಮೂಲಕವಾಗಿರಲಿ ಅಥವಾ ರೈಲು ಮೂಲಕವೇ ಆಗಿರಲಿ ವೈಯಕ್ತಿಕ ಸಾಮಾನುಗಳ ಸಾಗಾಣಿಕೆಗಾಗಿ ಮಾಡಿದ ವಾಸ್ತವಿಕ ವೆಚ್ಚಗಳು; ಪರಂತು, ಅಂಥ ಸಾಗಾಣಿಕೆಗಾಗಿ ರೈಲು ವ್ಯಾಗನನ್ನು ಮೀಸಲಿರಿಸಿದ್ದರೆ, ಅಂಥ ವ್ಯಾಗನ್ನಿಗಾಗಿ ವಹಿಸಿದ ವೆಚ್ಚಗಳು.

**ವಿವರಣೆ:-** ಈ ಪ್ರಕರಣದ ಉದ್ದೇಶಕ್ಕಾಗಿ "ಕುಟುಂಬದ ಸದಸ್ಯರು" ಎಂದರೆ, ಸಂದರ್ಭಾನುಸಾರ ಸಭಾಪತಿ ಅಥವಾ ಸಭಾಧ್ಯಕ್ಷರನ್ನು ಪೂರ್ಣವಾಗಿ ಅವಲಂಭಿಸಿರುವ ಮತ್ತು ಅವರೊಡನೆ ವಾಸಿಸುತ್ತಿರುವ ಗಂಡ, ಹೆಂಡತಿ, ಮಗ, ಮಗಳು, ತಂದೆ ತಾಯಿ, ಸಹೋದರ ಅಥವಾ ಸಹೋದರಿ.

**8. ಪ್ರವಾಸದ ಮೇಲಿರುವಾಗ ಸಭಾಪತಿ, ಉಪ-ಸಭಾಪತಿ, ಸಭಾಧ್ಯಕ್ಷ, [1][ಉಪ-ಸಭಾಧ್ಯಕ್ಷ, ವಿರೋಧ ಪಕ್ಷದ ನಾಯಕರು ಮತ್ತು ಸರ್ಕಾರಿ ಮುಖ್ಯ ಸಚೇತಕರು][1]- ಇವರುಗಳ ಪ್ರಯಾಣ ಭತ್ಯೆ ಮತ್ತು ಇತರ ಭತ್ಯೆಗಳು:-** (1) ಸಭಾಧ್ಯಕ್ಷ, ಉಪ-ಸಭಾಧ್ಯಕ್ಷ, ಸಭಾಪತಿ, ಮತ್ತು [1][ಉಪ-ಸಭಾಪತಿ, ವಿರೋಧ ಪಕ್ಷದ ನಾಯಕರು ಮತ್ತು ಸರ್ಕಾರಿ ಮುಖ್ಯ ಸಚೇತಕ][1] - ಇವರುಗಳು ತಮ್ಮ ಅಧಿಕಾರ ಸ್ಥಾನಗಳಿಗೆ ಸಂಬಂಧಿಸಿದ ಕರ್ತವ್ಯಗಳ ಮೇಲೆ ಪ್ರವಾಸ ಮಾಡುವಾಗ, ಈ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ದರಗಳು ಮತ್ತು ಷರತ್ತುಗಳ ಅನುಸಾರ ಪ್ರಯಾಣ ಮತ್ತು ದೈನಂದಿನ ಭತ್ಯೆ ಅಥವಾ ಇತರ ಭತ್ಯೆಗಳಿಗೆ ಹಕ್ಕುಳ್ಳವರಾಗಿರತಕ್ಕದ್ದು.

(2) [2][ಭಾರತದ ಒಳಗೆ ಪ್ರವಾಸ ಮಾಡುವಾಗ,][2] ಸಭಾಪತಿ, ಉಪ-ಸಭಾಪತಿ, ಸಭಾಧ್ಯಕ್ಷ ಮತ್ತು [1][ಉಪ-ಸಭಾಧ್ಯಕ್ಷ, ವಿರೋಧ ಪಕ್ಷದ ನಾಯಕರು ಮತ್ತು ಸರ್ಕಾರಿ ಮುಖ್ಯ ಸಚೇತಕ][1] -ಇವರು,-

(ಎ) ರೈಲಿನ ಮೂಲಕ ಮಾಡಲಾದ ಪ್ರಯಾಣಗಳಿಗಾಗಿ ಆ ರೈಲಿನಲ್ಲಿ ಲಭ್ಯವಿರುವ ಉತ್ತಮ ದರ್ಜೆಯ ಒಂದು ಪ್ರಯಾಣ ದರದ [3][ಎರಡರಷ್ಟಕ್ಕೆ][3] ಹಕ್ಕುಳ್ಳವರಾಗಿರತಕ್ಕದ್ದು:

ಪರಂತು, [4][ಸಭಾಪತಿ, ಉಪ-ಸಭಾಪತಿ, ಸಭಾಧ್ಯಕ್ಷ][4] ಅಥವಾ [1][ಉಪ-ಸಭಾಧ್ಯಕ್ಷ][4], ವಿರೋಧ ಪಕ್ಷದ ನಾಯಕರು ಮತ್ತು ಸರ್ಕಾರಿ ಮುಖ್ಯ ಸಚೇತಕರ][1] - ಇವರು ತಮ್ಮ ಪ್ರಯಾಣಕ್ಕೆ ಒಂದು ಬೋಗಿಯನ್ನು ಮೀಸಲಿರಿಸಿಕೊಂಡಿದ್ದರೆ ಅಂಥ ಬೋಗಿಯ ವೆಚ್ಚಗಳನ್ನು ರಾಜ್ಯ ಸರ್ಕಾರವು ಭರಿಸತಕ್ಕದ್ದು:

ಮತ್ತೂ ಪರಂತು, [4][ಸಭಾಪತಿ, ಉಪ-ಸಭಾಪತಿ, ಸಭಾಧ್ಯಕ್ಷ ಅಥವಾ [1][ಉಪ-ಸಭಾಧ್ಯಕ್ಷ,][4] ವಿರೋಧ ಪಕ್ಷದ ನಾಯಕರು ಮತ್ತು ಸರ್ಕಾರಿ ಮುಖ್ಯ ಸಚೇತಕ][1] ಇವರ ಜೊತೆಯಲ್ಲಿ ಯಾರೇ ವ್ಯಕ್ತಿ ಮೀಸಲಿರಿಸಿದ ಬೋಗಿಯಲ್ಲಿ ಪ್ರಯಾಣ ಮಾಡಿದರೆ ಅಂಥ ವ್ಯಕ್ತಿಯ ಸಂಬಂಧದ ವೆಚ್ಚಗಳನ್ನು ವಸೂಲು ಮಾಡತಕ್ಕದ್ದು ಮತ್ತು ಸರ್ಕಾರಕ್ಕೆ ಜಮೆ ಮಾಡತಕ್ಕದ್ದು;

(ಬಿ) ರಸ್ತೆಯ ಮೂಲಕ ಪ್ರಯಾಣ ಮಾಡಿದಾಗ [5][ಪ್ರತಿ ಕಿಲೋಮೀಟರಿಗೆ [6][ಎಂಟು ರೂಪಾಯಿ ][6]][5] ರಸ್ತೆ ಮೈಲು ದರಕ್ಕೆ ಹಕ್ಕುಳ್ಳವರಾಗಿರತಕ್ಕದ್ದು;

---

1. 1978ರ ಅಧಿನಿಯಮ ಸಂಖ್ಯೆ 31ರ ಮೂಲಕ 26ನೇ ಡಿಸೆಂಬರ್ 1978ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
2. 1959ರ ಅಧಿನಿಯಮ ಸಂಖ್ಯೆ 12ರ ಮೂಲಕ 1ನೇ ಏಪ್ರಿಲ್ 1959 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
3. 1974ರ ಅಧಿನಿಯಮ ಸಂಖ್ಯೆ 19ರ ಮೂಲಕ 27ನೇ ಮೇ 1974 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
4. 1975ರ ಅಧಿನಿಯಮ ಸಂಖ್ಯೆ 3ರ ಮೂಲಕ 14-10-1974 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
5. 1967ರ ಅಧಿನಿಯಮ ಸಂಖ್ಯೆ 8ರ ಮೂಲಕ 10-8-1967 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
6. 1997ರ ಅಧಿನಿಯಮ ಸಂಖ್ಯೆ 19ರ ಮೂಲಕ 1-9-1997 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ಸಿ) ವಿಮಾನದ ಮೂಲಕ ಮಾಡುವ ಪ್ರಯಾಣಕ್ಕಾಗಿ, ಅಂಥ ಪ್ರಯಾಣಕ್ಕೆ ಸಂದಾಯ ಮಾಡಿದ ಒಂದು ದರದ ಮತ್ತು ಒಂದು ಐದನೇ ಒಂದು ಭಾಗದಷ್ಟು [1][ಮತ್ತು ಅಂಥ ಪ್ರಯಾಣಗಳ ಸಂದರ್ಭದಲ್ಲಿ ಅಪಘಾತಗಳು ಉಂಟಾದಲ್ಲಿ ವಿಮೆಗಾಗಿ ನಿಗದಿಪಡಿಸಿದ ವಿಮಾ ಕಂತು][1] ಪಡೆಯಲು ಹಕ್ಕುಳ್ಳವರಾಗಿರತಕ್ಕದ್ದು;

(ಡಿ) ಪ್ರಯಾಣದ ದಿನಗಳಿಗಾಗಿ ಮತ್ತು ಯಾವುದೇ ಸ್ಥಳದಲ್ಲಿ ಉಳಿದು ಕೊಳ್ಳುವ ಪ್ರತಿ ದಿನಕ್ಕೆ [2][ಎಂಟುನೂರು][2] ರೂಪಾಯಿಗಳ ದಿನಭತ್ಯೆಗಳಿಗೆ ಹಕ್ಕುಳ್ಳವರಾಗಿರತಕ್ಕದ್ದು:

ಪರಂತು, ರಾಜ್ಯದ ಹೊರಗೆ ಮಾಡುವ ಪ್ರವಾಸಗಳ ಸಂದರ್ಭಗಳಲ್ಲಿ ಪ್ರಯಾಣದ ದಿನಗಳಿಗೆ ಮತ್ತು ಯಾವುದೇ ಸ್ಥಳದಲ್ಲಿ ಉಳಿದುಕೊಳ್ಳುವ ಪ್ರತಿ ದಿನಕ್ಕೆ [2][ಒಂದು ಸಾವಿರ][2] ರೂಪಾಯಿಗಳು ದಿನಭತ್ಯವಾಗಿರತಕ್ಕದ್ದು:

ಮತ್ತೂ ಪರಂತು, ಸಭಾಪತಿ, ಉಪ-ಸಭಾಪತಿ, ಸಭಾಧ್ಯಕ್ಷ ಮತ್ತು [3][ಉಪ-ಸಭಾಧ್ಯಕ್ಷ, ವಿರೋಧ ಪಕ್ಷದ ನಾಯಕರು ಮತ್ತು ಸರ್ಕಾರಿ ಮುಖ್ಯ ಸಚೇತಕ][3]- ಇವರನ್ನು ರಾಜ್ಯದ ಅತಿಥಿಗಳೆಂದು ಪರಿಗಣಿಸಿದ ಸಂದರ್ಭಗಳಲ್ಲಿ, ಅವರನ್ನು ರಾಜ್ಯದ ಅತಿಥಿ ಎಂದು ಪರಿಗಣಿಸಿದಂಥ ಅವಧಿಗಾಗಿ ದಿನಭತ್ಯದ ಕಾಲುಭಾಗದಷ್ಟು ಹಣವನ್ನು ಮಾತ್ರ ಪಡೆಯಲು ಹಕ್ಕುಳ್ಳವರಾಗಿರತಕ್ಕದ್ದು.

[4][(2ಎ) [5][ಸಭಾಪತಿ, ಉಪ-ಸಭಾಪತಿ, ಸಭಾಧ್ಯಕ್ಷ,][3] ಅಥವಾ [4][ಉಪ-ಸಭಾಧ್ಯಕ್ಷ][5], ವಿರೋಧ ಪಕ್ಷದ ನಾಯಕರು, ಸರ್ಕಾರಿ ಮುಖ್ಯ ಸಚೇತಕ][3] - ಇವರು ಸಾರ್ವಜನಿಕ ಹಿತಾಸಕ್ತಿಗಾಗಿ ರಾಜ್ಯ ಸರ್ಕಾರವು ಒದಗಿಸಿದ ಮೋಟಾರು ಕಾರಿನಲ್ಲಿ ರಸ್ತೆಯ ಮೂಲಕ ಪ್ರಯಾಣ ಮಾಡುತ್ತಿರುವಾಗ ಮುಂದಿನ ಪ್ರಯಾಣವನ್ನು ರೈಲು ಅಥವಾ ವಿಮಾನದ ಮೂಲಕ ಕೈಗೊಳ್ಳಬೇಕಾದರೆ ಅವರು ಮೋಟಾರು ಕಾರಿನ ಬಳಕೆಯನ್ನು ನಿಲ್ಲಿಸಿದ ಸ್ಥಳದಿಂದ ಬೆಂಗಳೂರು ನಗರಕ್ಕೆ ಮೋಟಾರು ಕಾರು ವಾಪಸ್ಸು ಬರಲು ಬಳಸಿದ ಪೆಟ್ರೋಲ್ ವೆಚ್ಚವನ್ನು ಪಡೆಯಲು ಹಕ್ಕುಳ್ಳವರಾಗಿರತಕ್ಕದ್ದು:

[6][ಪರಂತು, (2ಬಿ) ಪ್ರಕರಣದಲ್ಲಿ ಅನ್ಯಥಾ ಉಪಬಂಧಿಸಿರುವುದನ್ನುಳಿದು, ಭಾರತದಲ್ಲಿ ರಾಜ್ಯದ ಹೊರಗಡೆ ಪ್ರವಾಸದ ಮೇಲಿರುವಾಗ ಹಾಗೂ ಅವರು ತಮ್ಮೊಡನೆ ಮೋಟಾರು ಕಾರನ್ನು ತೆಗೆದುಕೊಂಡು ಹೋಗಿಲ್ಲದೇ ಇರುವಾಗ ಸಭಾಪತಿ, ಉಪ-ಸಭಾಪತಿ, ಸಭಾಧ್ಯಕ್ಷ, [3][ಉಪ-ಸಭಾಧ್ಯಕ್ಷ, ವಿರೋಧ ಪಕ್ಷದ ನಾಯಕರು ಮತ್ತು ಸರ್ಕಾರಿ ಮುಖ್ಯ ಸಚೇತಕ][3]- ಇವರು ತಮ್ಮ ಇಚ್ಛಾನುಸಾರ ಪ್ರಯಾಣ ಭತ್ಯದ ಬದಲಾಗಿ ಅಥವಾ ತಾವು ಹಕ್ಕುಳ್ಳವರಾದ ರಸ್ತೆ ಮೈಲು ದರದ ಬದಲಾಗಿ, ತಾವು ವಾಸ್ತವವಾಗಿ ಸಾರ್ವಜನಿಕ ಹಿತಾಸಕ್ತಿಗಾಗಿ ಬಾಡಿಗೆಗೆ ತೆಗೆದುಕೊಂಡ ಮೋಟಾರು ಕಾರಿನ ವಾಸ್ತವಿಕ ಬಾಡಿಗೆ ಪಡೆಯಲು ಹಕ್ಕುಳ್ಳವರಾಗಿರತಕ್ಕದ್ದು. ಸಂದರ್ಭಾನುಸಾರ, ಸಭಾಪತಿ, ಉಪ-ಸಭಾಪತಿ, ಸಭಾಧ್ಯಕ್ಷ, [3][ಉಪ-ಸಭಾಧ್ಯಕ್ಷ, ವಿರೋಧ ಪಕ್ಷದ ನಾಯಕರು ಮತ್ತು ಸರ್ಕಾರಿ ಮುಖ್ಯ ಸಚೇತಕ][3] - ಇವರು ಸಾರ್ವಜನಿಕ ಹಿತಾಸಕ್ತಿಯಲ್ಲಿ ಹಾಗೆ ಮೋಟಾರು ಕಾರನ್ನು ಬಾಡಿಗೆಗೆ ತೆಗೆದುಕೊಳ್ಳುವುದು ಅವಶ್ಯವಾಗಿತ್ತೆಂಬ ಪ್ರಮಾಣಪತ್ರವನ್ನು ಬಿಲ್‌ನೊಂದಿಗೆ ನೀಡತಕ್ಕದ್ದು.

(2ಬಿ) ಸಭಾಪತಿ, ಉಪ-ಸಭಾಪತಿ, ಸಭಾಧ್ಯಕ್ಷ, [3][ಉಪ-ಸಭಾಧ್ಯಕ್ಷ, ವಿರೋಧ ಪಕ್ಷದ ನಾಯಕರು ಮತ್ತು ಸರ್ಕಾರಿ ಮುಖ್ಯ ಸಚೇತಕ][3]- ಇವರು (2)ನೇ ಉಪ-ಪ್ರಕರಣದ ಮೇರೆಗೆ ಪಡೆಯುವ ಭತ್ಯೆಗಳ ಜೊತೆಗೆ ನವದೆಹಲಿಯ [7][ಕರ್ನಾಟಕ ಭವನ][7] ದಲ್ಲಿ ರಾಜ್ಯ ಸರ್ಕಾರವು ನಿರ್ವಹಿಸಿಕೊಂಡು ಬರುತ್ತಿರುವ ಮೋಟಾರು ಕಾರುಗಳನ್ನು ವೆಚ್ಚ ಸಂದಾಯ ಮಾಡದೇ ಬಳಸಲು ಹಕ್ಕುಳ್ಳವರಾಗಿರತಕ್ಕದ್ದು.][4]

[8][(3) (ಎ) ಸಭಾಪತಿ ಮತ್ತು ಸಭಾಧ್ಯಕ್ಷರು ಕರ್ತವ್ಯದ ಮೇಲೆ ಭಾರತದ ಹೊರಗೆ ಪ್ರವಾಸ ಮಾಡುವಾಗ, [9][ರಾಜ್ಯ ಸರ್ಕಾರದ ಸಚಿವರಿಗೆ ಅನ್ವಯಿಸುವ ಪ್ರಯಾಣ ಮತ್ತು ಇತರ ವೆಚ್ಚಗಳ ಸಂಬಂಧದಲ್ಲಿನ ನಿಬಂಧನೆಗಳಿಗೆ ಹಕ್ಕುಳ್ಳವರಾಗಿರತಕ್ಕದ್ದು][9].

[10][(ಎಎ) ಸಭಾಪತಿ, ಉಪ-ಸಭಾಪತಿ, ಸಭಾಧ್ಯಕ್ಷ, ಉಪ-ಸಭಾಧ್ಯಕ್ಷ, ವಿರೋಧ ಪಕ್ಷದ ನಾಯಕರು ಮತ್ತು ಸರ್ಕಾರಿ ಮುಖ್ಯ ಸಚೇತಕ- ಇವರು ವೈದ್ಯಕೀಯ ಚಿಕಿತ್ಸೆಗಾಗಿ ಭಾರತದ ಹೊರಗೆ ಪ್ರವಾಸ ಮಾಡುವಾಗ [9][ರಾಜ್ಯ ಸರ್ಕಾರದ ಸಚಿವರಿಗೆ ಅನ್ವಯಿಸುವ ಪ್ರಯಾಣ ಮತ್ತು ಇತರ ವೆಚ್ಚಗಳ ಸಂಬಂಧದಲ್ಲಿನ ನಿಬಂಧನೆಗಳಿಗೆ ಹಕ್ಕುಳ್ಳವರಾಗಿರತಕ್ಕದ್ದು.][9]][10]

[11][(ಬಿ) XXX][11]][8]

**9. ವೈದ್ಯಕೀಯ ಶುಶ್ರೂಷೆ:-** ರಾಜ್ಯ ಸರ್ಕಾರವು ರಚಿಸಿದ ನಿಯಮಗಳಿಗೆ ಒಳಪಟ್ಟು, [3][ಸಭಾಪತಿ, ಉಪ-ಸಭಾಪತಿ, ಸಭಾಧ್ಯಕ್ಷ ಮತ್ತು ಉಪ-ಸಭಾಧ್ಯಕ್ಷ,][3] [7][ವಿರೋಧ ಪಕ್ಷದ ನಾಯಕರು ಮತ್ತು ಸರ್ಕಾರಿ ಮುಖ್ಯ ಸಚೇತಕ][7] ಮತ್ತು ಸಂದರ್ಭಾನುಸಾರ [3][ಸಭಾಪತಿ,

1. 1968ರ ಅಧಿನಿಯಮ ಸಂಖ್ಯೆ 18ರ ಮೂಲಕ 1-11-1956 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
2. 2001ರ ಅಧಿನಿಯಮ ಸಂಖ್ಯೆ 14ರ ಮೂಲಕ 1-12-2000 ದಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
3. 1978ರ ಅಧಿನಿಯಮ ಸಂಖ್ಯೆ 31ರ ಮೂಲಕ 26-12-1978 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
4. 1968ರ ಅಧಿನಿಯಮ ಸಂಖ್ಯೆ 18ರ ಮೂಲಕ 1-1-1966 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
5. 1975ರ ಅಧಿನಿಯಮ ಸಂಖ್ಯೆ 3ರ ಮೂಲಕ 14-10-1974 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
6. 1976ರ ಅಧಿನಿಯಮ ಸಂಖ್ಯೆ 72ರ ಮೂಲಕ 1-1-1996 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
7. 1973ರ ಕಾನೂನುಗಳ ಅಳವಡಿಕೆ ಆದೇಶ, ಅನುಸೂಚಿ-II ಕ್ರ.ಸಂ. 1ರ ಮೂಲಕ 1.11.1973 ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.
8. 1976ರ ಅಧಿನಿಯಮ ಸಂಖ್ಯೆ 49ರ ಮೂಲಕ 1.7.1974 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
9. 1987ರ ಅಧಿನಿಯಮ ಸಂಖ್ಯೆ 16ರ ಮೂಲಕ 1.4.1987 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
10. 1979ರ ಅಧಿನಿಯಮ ಸಂಖ್ಯೆ 31ರ ಮೂಲಕ 1.6.1979 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
11. 1987ರ ಅಧಿನಿಯಮ ಸಂಖ್ಯೆ 16ರ ಮೂಲಕ 1.4.1987 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

ಉಪ- ಸಭಾಪತಿ, ಸಭಾಧ್ಯಕ್ಷ ಅಥವಾ ಉಪ-ಸಭಾಧ್ಯಕ್ಷ,][3] [1][ವಿರೋಧ ಪಕ್ಷದ ನಾಯಕ ಮತ್ತು ಸರ್ಕಾರಿ ಮುಖ್ಯ ಸಚೇತಕ][1]- ಇವರೊಂದಿಗೆ ವಾಸಿಸುವ ಮತ್ತು ಅವರನ್ನು ಅವಲಂಬಿಸಿದ ಕುಟುಂಬದ ಸದಸ್ಯರು, ರಾಜ್ಯ ಸರ್ಕಾರವು ನಿರ್ವಹಿಸುವ ಆಸ್ಪತ್ರೆಯಲ್ಲಿ ಕೊಠಡಿ ಮತ್ತು ವೈದ್ಯಕೀಯ ಶುಶ್ರೂಷೆ ಮತ್ತು ಚಿಕಿತ್ಸೆಗಳನ್ನು ಉಚಿತವಾಗಿ ಪಡೆಯಲು ಹಕ್ಕುಳ್ಳವರಾಗಿರತಕ್ಕದ್ದು. [2][ರಾಜ್ಯ ಸರ್ಕಾರವು ರಚಿಸಿದ ನಿಯಮಗಳಿಗೆ ಒಳಪಟ್ಟು [3][ಭಾರತದಲ್ಲಾಗಲಿ ಅಥವಾ ಹೊರಗಡೆಯಾಗಲಿ][3] ಇತರ ಯಾವುದೇ ಸ್ಥಳದಲ್ಲಿ ಪಡೆದುಕೊಂಡ ವೈದ್ಯಕೀಯ ಶುಶ್ರೂಷೆ ಮತ್ತು ಚಿಕಿತ್ಸೆಗಾಗಿ ಅವರು ಖರ್ಚು ಮಾಡಿದ ವೆಚ್ಚಗಳಿಗೆ ಸರ್ಕಾರದಿಂದ ಹಣದ ಮರು ಭರ್ತಿ ಹೊಂದಲು ಸಹ ಅವರು ಹಕ್ಕುಳ್ಳವರಾಗಿರತಕ್ಕದ್ದು][2]

**ವಿವರಣೆ:–** ಈ ಪ್ರಕರಣ[1][ಮತ್ತು (12)ನೇ ಪ್ರಕರಣ][1]ದ ಉದ್ದೇಶ ಕುಟುಂಬದ ಸದಸ್ಯರು ಎಂದರೆ ಗಂಡ, ಹೆಂಡತಿ, ಮಗ, ಮಗಳು, ತಂದೆ-ತಾಯಿ, ಸಹೋದರ ಅಥವಾ ಸಹೋದರಿ.

**10. ಉಪ-ಸಭಾಪತಿ ಮತ್ತು ಉಪ-ಸಭಾಧ್ಯಕ್ಷರ ಸಂಬಳಗಳು:–** [4][(1)][4] ಉಪ-ಸಭಾಪತಿ ಮತ್ತು ಉಪ-ಸಭಾಧ್ಯಕ್ಷ ಈ ಪ್ರತಿಯೊಬ್ಬರಿಗೂ ತಿಂಗಳಿಗೆ [5][ನಾಲ್ಕು ಸಾವಿರ ರೂಪಾಯಿಗಳ][5] ಸಂಬಳವನ್ನು ಸಂದಾಯ ಮಾಡತಕ್ಕದ್ದು.

[2][(2)ಉಪಸಭಾಪತಿ ಮತ್ತು ಉಪ-ಸಭಾಧ್ಯಕ್ಷ ಈ ಪ್ರತಿಯೊಬ್ಬರಿಗೂ, ಪ್ರತಿ ತಿಂಗಳಿಗೆ, [6][ಐದು ನೂರು ಲೀಟರ್][6] [7][ಪೆಟ್ರೋಲ್ ಬೆಲೆಗೆ ಸಮನಾದ][7] ವಾಹನ ಭತ್ಯೆವನ್ನು ಸಂದಾಯ ಮಾಡತಕ್ಕದ್ದು.][2]

[8]**[10ಎ. ಉಪ-ಸಭಾಪತಿ, ಉಪ-ಸಭಾಧ್ಯಕ್ಷ ಅಥವಾ ಸಭಾಪತಿ ಅಥವಾ ಸಭಾಧ್ಯಕ್ಷರ ಕರ್ತವ್ಯಗಳನ್ನು ನಿರ್ವಹಿಸುವ ವ್ಯಕ್ತಿಗೆ ಸಂದಾಯ ಮಾಡಬೇಕಾದ ಸಂಬಳ, ವಾಹನ ಮತ್ತು ವಾಹನ ಭತ್ಯೆ:–** (1) ಈ ಅಧಿನಿಯಮದಲ್ಲಿ ಏನೇ ಇದ್ದರೂ, ಸಭಾಪತಿಯ ಸ್ಥಾನವು ಖಾಲಿ ಇದ್ದಾಗ ಮತ್ತು ಸದರಿ ಸ್ಥಾನದ ಕರ್ತವ್ಯಗಳನ್ನು ಉಪ-ಸಭಾಪತಿ ಅಥವಾ ಸಂವಿಧಾನದ 184ನೇ ಅನುಚ್ಛೇದದ (ಬಿ) ಖಂಡದ ಮೇರೆಗೆ ನೇಮಕ ಮಾಡಿದ ವಿಧಾನ ಪರಿಷತ್ತಿನ ಸದಸ್ಯರೊಬ್ಬರು ನಿರ್ವಹಿಸಿದರೆ, ಉಪ-ಸಭಾಪತಿ ಅಥವಾ ಅಂಥ ಸದಸ್ಯರಿಗೆ ಅವರು ಹಾಗೆ ಕರ್ತವ್ಯ ನಿರ್ವಹಿಸಿದ ಅವಧಿಗಾಗಿ ಪ್ರತಿ ತಿಂಗಳಿಗೆ [9][ಐದು ಸಾವಿರದ ಐದುನೂರು ರೂಪಾಯಿಗಳ][9] ಸಂಬಳವನ್ನು ಸಂದಾಯ ಮಾಡತಕ್ಕದ್ದು ಮತ್ತು ಸೂಕ್ತ ಮೋಟಾರು ಕಾರು ಒದಗಿಸತಕ್ಕದ್ದು ಮತ್ತು 5 ಮತ್ತು 6ನೇ ಪ್ರಕರಣಗಳ ಉಪಬಂಧಗಳ ಅನುಸಾರ ವಾಹನ ಭತ್ಯವನ್ನು ಸಂದಾಯ ಮಾಡತಕ್ಕದ್ದು:

ಪರಂತು, ಮೇಲೆ ಹೇಳಲಾದ ಅವಧಿಯಲ್ಲಿ ಸಂದರ್ಭಾನುಸಾರ, ಉಪ-ಸಭಾಪತಿ ಅಥವಾ ಸದಸ್ಯರು 10ನೇ ಪ್ರಕರಣ ಅಥವಾ 11ನೇ ಪ್ರಕರಣದ ಮೇರೆಗಿನ ಸಂಬಳ ಮತ್ತು ವಿಶೇಷ ಭತ್ಯೆ ಪಡೆಯಲು ಹಕ್ಕುಳ್ಳವರಾಗಿರತಕ್ಕದ್ದಲ್ಲ.

(2) ಈ ಅಧಿನಿಯಮದಲ್ಲಿ ಏನೇ ಇದ್ದರೂ, ಸಭಾಧ್ಯಕ್ಷನ ಸ್ಥಾನವು ಖಾಲಿ ಇದ್ದಾಗ ಮತ್ತು ಆ ಖಾಲಿ ಸ್ಥಾನದ ಕರ್ತವ್ಯಗಳನ್ನು ಉಪ-ಸಭಾಧ್ಯಕ್ಷ ಅಥವಾ ಸಂವಿಧಾನದ 180ನೇ ಅನುಚ್ಛೇದದ (1)ನೇ ಖಂಡದ ಮೇರೆಗೆ ನೇಮಕಗೊಂಡಂಥ ವಿಧಾನಸಭೆಯ ಸದಸ್ಯರೊಬ್ಬರು ನಿರ್ವಹಿಸಿದರೆ ಅಂಥ ಕರ್ತವ್ಯಗಳನ್ನು ಅವರು ನಿರ್ವಹಿಸಿದ ಅಂಥ ಅವಧಿಗಾಗಿ ಅವರಿಗೆ ಪ್ರತಿ ತಿಂಗಳಿಗೆ [9][ಐದು ಸಾವಿರದ ಐದುನೂರು ರೂಪಾಯಿಗಳ][9] ಸಂಬಳ ಸಂದಾಯ ಮಾಡತಕ್ಕದ್ದು ಮತ್ತು ಸೂಕ್ತ ಮೋಟಾರು ಕಾರನ್ನು ಒದಗಿಸತಕ್ಕದ್ದು. ಹಾಗೂ 5 ಮತ್ತು 6ನೇ ಪ್ರಕರಣದ ಉಪಬಂಧಗಳ ಅನುಸಾರ ವಾಹನ ಭತ್ಯವನ್ನು ಸಂದಾಯ ಮಾಡತಕ್ಕದ್ದು:

ಪರಂತು, ಮೇಲೆ ಹೇಳಲಾದ ಅವಧಿಯಲ್ಲಿ ಸಂದರ್ಭಾನುಸಾರ ಉಪ-ಸಭಾಧ್ಯಕ್ಷ ಅಥವಾ ಸದಸ್ಯರು 10ನೇ ಪ್ರಕರಣ ಅಥವಾ 11ನೇ ಪ್ರಕರಣದ ಮೇರೆಗಿನ ಸಂಬಳ ಮತ್ತು ವಿಶೇಷ ಭತ್ಯೆ ಪಡೆಯಲು ಹಕ್ಕುಳ್ಳವರಾಗಿರತಕ್ಕದ್ದಲ್ಲ][8]

[10]**[10ಬಿ ಉಪ-ಸಭಾಪತಿ ಮತ್ತು ಉಪ-ಸಭಾಧ್ಯಕ್ಷರ ವಾಸದ ಮನೆಗಳು:–** (1) ಉಪ-ಸಭಾಪತಿ ಮತ್ತು ಉಪ-ಸಭಾಧ್ಯಕ್ಷ- ಈ ಪ್ರತಿಯೊಬ್ಬರು ಅಧಿಕಾರದ ಅವಧಿ ಮತ್ತು ಅದರ ನಿಕಟ ತರುವಾಯದ [11][ಅರವತ್ತು ದಿವಸಗಳ][11] ಅವಧಿಗಾಗಿ ಬೆಂಗಳೂರು [12][ಅಥವಾ ಬೆಂಗಳೂರು ನಗರದ ಪರಿಮಿತಿಯಿಂದ ಮೂವತ್ತು ಕಿಲೋಮೀಟರು ವ್ಯಾಪ್ತಿಯೊಳಗೆ][12] ಒಂದು ಸುಸಜ್ಜಿತ ಮನೆಯನ್ನು ಬಳಸಲು [13][XXX][13] ಹಕ್ಕುಳ್ಳವರಾಗಿರತಕ್ಕದ್ದು ಅಥವಾ ಅಂಥ ಸುಸಜ್ಜಿತ ವಾಸದ ಮನೆಗೆ ಬದಲಾಗಿ ತಿಂಗಳಿಗೆ [9][ಹತ್ತು ಸಾವಿರ ರೂಪಾಯಿಗಳ][9] ದರದಲ್ಲಿ ಮನೆ ಬಾಡಿಗೆ ಭತ್ಯೆಗೆ ಹಕ್ಕುಳ್ಳವರಾಗಿರತಕ್ಕದ್ದು. [14][ಈ ಉಪ-ಪ್ರಕರಣದ ಮೇರೆಗೆ ಒದಗಿಸಲಾದ ವಾಸದ

1. 1978ರ ಅಧಿನಿಯಮ ಸಂಖ್ಯೆ 31ರ ಮೂಲಕ 26.12.1978 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
2. 1974ರ ಅಧಿನಿಯಮ ಸಂಖ್ಯೆ 19ರ ಮೂಲಕ 27.5.1974 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
3. 1979ರ ಅಧಿನಿಯಮ ಸಂಖ್ಯೆ 31ರ ಮೂಲಕ 21.6.1979 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
4. 1974ರ ಅಧಿನಿಯಮ ಸಂಖ್ಯೆ 19ರ ಮೂಲಕ 27.05.1974 ರಿಂದ ಜಾರಿಗೆ ಬರುವಂತೆ ಪುನಃ ಸಂಖ್ಯೆ ನೀಡಲಾಗಿದೆ.
5. 1994ರ ಅಧಿನಿಯಮ ಸಂಖ್ಯೆ 5ರ ಮೂಲಕ 01.09.1993 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
6. 1997ರ ಅಧಿನಿಯಮ ಸಂಖ್ಯೆ 19ರ ಮೂಲಕ 01.09.1997 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
7. 1991ರ ಅಧಿನಿಯಮ ಸಂಖ್ಯೆ 5ರ ಮೂಲಕ 01.11.1990 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
8. 1968ರ ಅಧಿನಿಯಮ ಸಂಖ್ಯೆ 18ರ ಮೂಲಕ 01.11.1956 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
9. 2001ರ ಅಧಿನಿಯಮ ಸಂಖ್ಯೆ 14ರ ಮೂಲಕ 01.12.2000 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
10. 1975ರ ಅಧಿನಿಯಮ ಸಂಖ್ಯೆ 3ರ ಮೂಲಕ 10ಬಿ ಯಿಂದ 10ಡಿ ವರೆಗಿನ ಪ್ರಕರಣಗಳನ್ನು 14.10.1974 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ..
11. 1978ರ ಅಧಿನಿಯಮ ಸಂಖ್ಯೆ 31ರ ಮೂಲಕ 14.10.1974 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
12. 1994ರ ಅಧಿನಿಯಮ ಸಂಖ್ಯೆ 5ರ ಮೂಲಕ 21.06.1993 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
13. 1978ರ ಅಧಿನಿಯಮ ಸಂಖ್ಯೆ 31ರ ಮೂಲಕ 14.10.1974 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.
14. 1979ರ ಅಧಿನಿಯಮ ಸಂಖ್ಯೆ 5ರ ಮೂಲಕ 27.12.1978 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

ಮನೆಯು ನಿಯಮಿಸಬಹುದಾದಂಥ ಶ್ರೇಣಿಗಳಲ್ಲಿ ಸುಸಜ್ಜಿತಗೊಂಡಿರತಕ್ಕದ್ದು ಮತ್ತು ಅದರ ಮೇಲ್ವಾಯವು ನಿಯಮಿಸಬಹುದಾದಂಥ ಪರಿಮಿತಿಗಳನ್ನು ಮೀರತಕ್ಕದ್ದಲ್ಲ:][14]

[1][ಪರಂತು, ಉಪ-ಸಭಾಪತಿ, ಅಥವಾ ಉಪ-ಸಭಾಧ್ಯಕ್ಷನು ಮೇಲೆ ಹೇಳಲಾದ ಸೌಲಭ್ಯವನ್ನು ಪಡೆದುಕೊಳ್ಳಲು ಇಚ್ಛಿಸದಿದ್ದರೆ ಅದರ ಬಗ್ಗೆ ರಾಜ್ಯ ಸರ್ಕಾರಕ್ಕೆ ಮಾಹಿತಿ ನೀಡಬಹುದು ಮತ್ತು ಹಾಗೆ ನೀಡಲಾದ ಮಾಹಿತಿಯನ್ನು ಯಾವುದೇ ಕಾಲದಲ್ಲಾಗಲಿ ರದ್ದುಪಡಿಸಬಹುದು.][1]

(2) ಸುಸಜ್ಜಿತ ವಾಸದ ಮನೆಗೆ ಬದಲಾಗಿ ಮನೆ ಬಾಡಿಗೆ ಭತ್ಯಕ್ಕೆ ಹಕ್ಕುಳ್ಳವರಾದ ಸಭಾಪತಿ ಅಥವಾ ಉಪ-ಸಭಾಧ್ಯಕ್ಷರು ಬಳಸುವ ವಾಸದ ಮನೆಯಲ್ಲಿ ಸರ್ಕಾರಿ ಉದ್ದೇಶಗಳಿಗಾಗಿ ಬಳಸಲು ನಿಯಮಿಸಬಹುದಾದಂಥ ಶ್ರೇಣಿಯಲ್ಲಿ ರಾಜ್ಯ ಸರ್ಕಾರವು ಮೂರು ಕೊಠಡಿಗಳನ್ನು ಸುಸಜ್ಜಿತಗೊಳಿಸತಕ್ಕದ್ದು. [2][ವಾಸದ ಮನೆಯ ನಿರ್ವಹಣೆ ಹಾಗೂ ಅದನ್ನು ಸುಸ್ಥಿತಿಯಲ್ಲಿಡಲು ಮತ್ತು ಅಂಥ ವಾಸದ ಮನೆಗೆ ಸೇರಿದ ತೋಟದ ರೂಪರೇಷೆ ಮತ್ತು ನಿರ್ವಹಣೆಗಾಗಿ ತಿಂಗಳಿಗೆ ಐದು ಸಾವಿರ ರೂಪಾಯಿಗಳ ಭತ್ಯಕ್ಕೆ ಅವರು ಹಕ್ಕುಳ್ಳವರಾಗಿರತಕ್ಕದ್ದು.][2]

**10ಸಿ. ಉಪ-ಸಭಾಪತಿ ಮತ್ತು ಉಪ-ಸಭಾಧ್ಯಕ್ಷರ ವಾಹನ ಸೌಲಭ್ಯ:-** ರಾಜ್ಯ ಸರ್ಕಾರವು ಉಪಸಭಾಪತಿ ಮತ್ತು ಉಪಸಭಾಧ್ಯಕ್ಷರು - ಪ್ರತಿಯೊಬ್ಬರ ಬಳಕೆಗಾಗಿ ಸೂಕ್ತ ಮೋಟಾರು ಕಾರನ್ನು ಒದಗಿಸಬಹುದು.

**10ಡಿ. ಉಪ-ಸಭಾಪತಿ ಮತ್ತು ಉಪ-ಸಭಾಧ್ಯಕ್ಷರ ಹಾಗೂ ಸರ್ಕಾರ ಸಂದಾಯ ಮಾಡಬೇಕಾದ ವೆಚ್ಚಗಳು:-** (1) ಉಪಸಭಾಪತಿ ಮತ್ತು ಉಪಸಭಾಧ್ಯಕ್ಷರು 10ಬಿ ಪ್ರಕರಣದ (1)ನೇ ಉಪ-ಪ್ರಕರಣ ಮತ್ತು 10ಸಿ ಪ್ರಕರಣದ ಮೇರೆಗೆ ಅವರ ಬಳಕೆಗಾಗಿ ಹಂಚಿಕೆ ಮಾಡಲಾದ ವಾಸದ ಮನೆ ಮತ್ತು ಮೋಟಾರು ಕಾರುಗಳ ಸಂಬಂಧದಲ್ಲಿ ಈ ಮುಂದಿನ ವೆಚ್ಚಗಳನ್ನು ಸಂದಾಯ ಮಾಡಲು ಬದ್ಧರಾಗಿರತಕ್ಕದ್ದು, ಎಂದರೆ:-

[3][(ಎ) ಸರ್ಕಾರವು ಸಂದಾಯ ಮಾಡಿದ [4][ಐದುನೂರು ಲೀಟರ್][4] ಪೆಟ್ರೋಲ್ ಬೆಲೆಗಿಂತ ಹೆಚ್ಚಾಗಿ ತಮ್ಮ ತಮ್ಮ ಮೋಟಾರು ಕಾರುಗಳಿಗೆ ಅಗತ್ಯವಾದ ಪೆಟ್ರೋಲ್ ಬೆಲೆ; ಮತ್ತು][3]

[5][(ಬಿ) ವಾಸದ ಮನೆಯಲ್ಲಿ ವಿದ್ಯುಚ್ಛಕ್ತಿ ಮತ್ತು ನೀರಿನ ಬಳಕೆ ಸಂಬಂಧದಲ್ಲಿ ಅವೆರಡೂ ಸೇರಿ ಒಟ್ಟು ಮಾಸಿಕ ದರಗಳ ಮೊದಲ ಎರಡು ನೂರು ರೂಪಾಯಿಗಳು.][5]

(2) 10ಬಿ ಪ್ರಕರಣದ (1)ನೇ ಉಪ-ಪ್ರಕರಣದ ಮೇರೆಗೆ ಒದಗಿಸಿದ ವಾಸದ ಮನೆ ಮತ್ತು 10ಸಿ ಪ್ರಕರಣದ ಮೇರೆಗೆ ಒದಗಿಸಿದ ಮೋಟಾರಿನ ದುರಸ್ತಿ ವೆಚ್ಚವು ಸೇರಿದಂತೆ ಅವುಗಳ ನಿರ್ವಹಣೆ ಮತ್ತು ಸುಸ್ಥಿತಿಯಲ್ಲಿಡುವ ಹಾಗೂ ಅಂಥ ಮೋಟಾರು ಕಾರಿನ ಚಾಲಕರು ಮತ್ತು ಕ್ಲೀನರ್‌ಗಳ ಸಂಬಳಗಳು ಮತ್ತು ಭತ್ಯೆಗಳು, ದರಗಳು ಮತ್ತು ತೆರಿಗೆಗಳು ಹಾಗೂ ಅಂಥ ವಾಸದ ಮನೆಗೆ ಸೇರಿದ ತೋಟಗಳ ರೂಪರೇಷೆ ಹಾಗೂ ಅವುಗಳ ನಿರ್ವಹಣೆ - ಈ ಇತರ ಎಲ್ಲಾ ವೆಚ್ಚಗಳನ್ನು ರಾಜ್ಯ ಸರ್ಕಾರವು ಭರಿಸತಕ್ಕದ್ದು.][10]

[6]**[10ಇ. ವಿರೋಧ ಪಕ್ಷದ ನಾಯಕನ ಸಂಬಳ:-** ವಿರೋಧ ಪಕ್ಷದ ಪ್ರತಿಯೊಬ್ಬ ನಾಯಕನಿಗೆ ತಿಂಗಳಿಗೆ [7][ಐದು ಸಾವಿರ ರೂಪಾಯಿಗಳ][7] ಸಂಬಳವನ್ನು ಸಂದಾಯ ಮಾಡತಕ್ಕದ್ದು.

**10ಎಫ್. ವಿರೋಧ ಪಕ್ಷದ ನಾಯಕನ ವಾಸದ ಮನೆ:-** (1) ವಿರೋಧ ಪಕ್ಷದ ಪ್ರತಿಯೊಬ್ಬ ನಾಯಕನೂ ಅವನ ಅಧಿಕಾರದ ಅವಧಿ ಮತ್ತು ಅದರ ನಿಕಟ ತರುವಾಯದ [8][ಅರವತ್ತು ದಿವಸಗಳ][8] ಅವಧಿಗಾಗಿ ಬೆಂಗಳೂರು [2][ಅಥವಾ ಬೆಂಗಳೂರು ನಗರದ ಪರಿಮಿತಿಯಿಂದ ಮೂವತ್ತು ಕಿಲೋಮೀಟರ್ ಒಳಗೆ][2] ಒಂದು ಸುಸಜ್ಜಿತ ವಾಸದ ಮನೆಯನ್ನು [9][XXX][9] ಬಳಸಲು ಅಥವಾ ಅಂಥ ಸುಸಜ್ಜಿತ ಮನೆಗೆ ಬದಲಾಗಿ ತಿಂಗಳಿಗೆ [7][ಹತ್ತು ಸಾವಿರ ರೂಪಾಯಿಗಳ][7] ದರದಲ್ಲಿ ಮನೆ ಬಾಡಿಗೆ ಭತ್ಯೆ ಪಡೆಯಲು ಹಕ್ಕುಳ್ಳವರಾಗಿರತಕ್ಕದ್ದು.[10][ಈ ಉಪ-ಪ್ರಕರಣದ ಮೇರೆಗೆ ಒದಗಿಸಲಾದ ವಾಸದ ಮನೆಯು ನಿಯಮಿಸಲಾದಂಥ ಶ್ರೇಣಿಗಳಲ್ಲಿ ಸುಸಜ್ಜಿತಗೊಂಡಿರತಕ್ಕದ್ದು ಮತ್ತು ಅದರ ಮೇಲ್ವಾಯವು ನಿಯಮಿಸಲಾದಂಥ ಪರಿಮಿತಿಗಳನ್ನು ಮೀರತಕ್ಕದ್ದಲ್ಲ:][10]

---

1. 1976ರ ಅಧಿನಿಯಮ ಸಂಖ್ಯೆ 72ರ ಮೂಲಕ 14.10.1974 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
2. 1994ರ ಅಧಿನಿಯಮ ಸಂಖ್ಯೆ 5ರ ಮೂಲಕ 1ನೇ ಸೆಪ್ಟೆಂಬರ್ 1993 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
3. 1991ರ ಅಧಿನಿಯಮ ಸಂಖ್ಯೆ 5ರ ಮೂಲಕ 1-11-90 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
4. 1997ರ ಅಧಿನಿಯಮ ಸಂಖ್ಯೆ 19ರ ಮೂಲಕ 1-9-1997 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
5. 1978ರ ಅಧಿನಿಯಮ ಸಂಖ್ಯೆ 31ರ ಮೂಲಕ 14-10-1974 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
6. 1976ರ ಅಧಿನಿಯಮ ಸಂಖ್ಯೆ 72ರ ಮೂಲಕ 10ಇ ಯಿಂದ 10ಎನ್ ವರೆಗಿನ ಪ್ರಕರಣಗಳನ್ನು 19.7.1976 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
7. 2001ರ ಅಧಿನಿಯಮ ಸಂಖ್ಯೆ 14ರ ಮೂಲಕ 1-12-2000 ದಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
8. 1978ರ ಅಧಿನಿಯಮ ಸಂಖ್ಯೆ 31ರ ಮೂಲಕ 19ನೇ ಜುಲೈ 1976 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
9. 1978ರ ಅಧಿನಿಯಮ ಸಂಖ್ಯೆ 31ರ ಮೂಲಕ 19.7.1976 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.
10. 1979ರ ಅಧಿನಿಯಮ ಸಂಖ್ಯೆ 5ರ ಮೂಲಕ 27.12.1978 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

ಪರಂತು, ವಿರೋಧಪಕ್ಷದ ನಾಯಕನು ಮೇಲೆ ಹೇಳಲಾದ ಸೌಲಭ್ಯಗಳನ್ನು ಪಡೆದುಕೊಳ್ಳಲು ಇಚ್ಛಿಸದೆ ಇದ್ದಲ್ಲಿ ಆ ಬಗ್ಗೆ ರಾಜ್ಯ ಸರ್ಕಾರಕ್ಕೆ ಮಾಹಿತಿ ನೀಡಬಹುದು ಮತ್ತು ಹಾಗೆ ನೀಡಲಾದ ಮಾಹಿತಿಯನ್ನು ಯಾವುದೇ ಕಾಲದಲ್ಲಾಗಲಿ ರದ್ದುಪಡಿಸಬಹುದು.

(2) ಸುಸಜ್ಜಿತ ವಾಸದ ಮನೆಗೆ ಬದಲಾಗಿ ಮನೆ ಬಾಡಿಗೆ ಭತ್ಯಕ್ಕೆ ಹಕ್ಕುಳ್ಳ ವಿರೋಧ ಪಕ್ಷದ ನಾಯಕನು ಬಳಸುವ ವಾಸದ ಮನೆಯಲ್ಲಿ ಸರ್ಕಾರಿ ಉದ್ದೇಶಗಳಿಗಾಗಿ ಬಳಸಲು ನಿಯಮಿಸಲಾದಂಥ ಶ್ರೇಣಿಯಲ್ಲಿ ರಾಜ್ಯ ಸರ್ಕಾರವು ಮೂರು ಕೊಠಡಿಗಳನ್ನು ಸುಸಜ್ಜಿತಗೊಳಿಸತಕ್ಕದ್ದು. [1][ನಿವಾಸದ ಮನೆಯ ನಿರ್ವಹಣೆ ಹಾಗೂ ಅದನ್ನು ಸುಸ್ಥಿತಿಯಲ್ಲಿಡಲು ಮತ್ತು ಅಂಥ ವಾಸದ ಮನೆಗೆ ಸೇರಿದ ತೋಟದ ರೂಪುರೇಷೆ ಹಾಗೂ ನಿರ್ವಹಣೆಗಾಗಿ ತಿಂಗಳಿಗೆ ಐದು ಸಾವಿರ ರೂಪಾಯಿಗಳ ಭತ್ಯಕ್ಕೆ ಅವರು ಹಕ್ಕುಳ್ಳವರಾಗಿರತಕ್ಕದ್ದು.][1]

**10ಜಿ. ವಿರೋಧ ಪಕ್ಷದ ನಾಯಕರಿಗೆ ವಾಹನ ಸೌಲಭ್ಯ:–** (1) ರಾಜ್ಯ ಸರ್ಕಾರವು ಪ್ರತಿಯೊಬ್ಬ ವಿರೋಧ ಪಕ್ಷದ ನಾಯಕನಿಗೆ ಬಳಸಲು ಸೂಕ್ತ ಮೋಟಾರು ಕಾರನ್ನು ಒದಗಿಸತಕ್ಕದ್ದು.

(2) ಪ್ರತಿಯೊಬ್ಬ ವಿರೋಧ ಪಕ್ಷದ ನಾಯಕನಿಗೆ ಸರ್ಕಾರವು ಪ್ರತಿ ತಿಂಗಳು [2][ಐದುನೂರು ಲೀಟರ್ [3][ಪೆಟ್ರೋಲ್ ಬೆಲೆಗೆ ಸಮನಾದ][3]][2] ವಾಹನ ಭತ್ಯೆವನ್ನು ಸಂದಾಯ ಮಾಡತಕ್ಕದ್ದು.

**[4][10ಹೆಚ್ xxxx][4].**

**10ಐ. ವಿರೋಧ ಪಕ್ಷದ ನಾಯಕರು ಮತ್ತು ಸರ್ಕಾರ ಸಂದಾಯ ಮಾಡಬೇಕಾದ ವೆಚ್ಚಗಳು:–** (1) ಪ್ರತಿಯೊಬ್ಬ ವಿರೋಧ ಪಕ್ಷದ ನಾಯಕನು 10ಎಫ್ ಪ್ರಕರಣದ (1)ನೇ ಉಪ-ಪ್ರಕರಣ ಮತ್ತು 10ಜಿ ಪ್ರಕರಣದ ಮೇರೆಗೆ ಅವರ ಬಳಕೆಗಾಗಿ ಹಂಚಿಕೆ ಮಾಡಲಾದ ವಾಸದ ಮನೆ ಮತ್ತು ಮೋಟಾರು ಕಾರಿನ ಸಂಬಂಧದಲ್ಲಿ ಈ ಮುಂದಿನ ಶುಲ್ಕಗಳನ್ನು ಸಂದಾಯ ಮಾಡಲು ಬದ್ಧರಾಗಿರತಕ್ಕದ್ದು, ಎಂದರೆ:-

[3][(ಎ) ಸರ್ಕಾರವು ಸಂದಾಯ ಮಾಡಿದ [2][ಐದುನೂರು ಲೀಟರ್][2] ಪೆಟ್ರೋಲ್ ಬೆಲೆಗಿಂತ ಹೆಚ್ಚಾಗಿ ತಮ್ಮ ಮೋಟಾರು ಕಾರುಗಳಿಗೆ ಬಳಸಿದ ಪೆಟ್ರೋಲ್ ವೆಚ್ಚ; ಮತ್ತು][3]

[5][(ಬಿ) ವಾಸದ ಮನೆಯಲ್ಲಿ ವಿದ್ಯುಚ್ಛಕ್ತಿ ಮತ್ತು ನೀರು ಬಳಕೆ ಸಂಬಂಧದಲ್ಲಿ ಒಟ್ಟು ಮಾಸಿಕ ದರದ ಮೊದಲ ಎರಡು ನೂರು ರೂಪಾಯಿಗಳು.][5]

(2) 10ಎಫ್ ಪ್ರಕರಣದ (1)ನೇ ಉಪ-ಪ್ರಕರಣದ ಮೇರೆಗೆ ಒದಗಿಸಲಾದ ವಾಸದ ಮನೆ ಮತ್ತು 10ಜಿ ಪ್ರಕರಣದ ಮೇರೆಗೆ ಒದಗಿಸಲಾದ ಮೋಟಾರು ಕಾರು- ಇದರ ದುರಸ್ತಿ ವೆಚ್ಚವೂ ಸೇರಿದಂತೆ ಅವುಗಳ ನಿರ್ವಹಣೆ ಮತ್ತು ಸುಸ್ಥಿತಿಯಲ್ಲಿಡುವ ಹಾಗೂ ಅಂಥ ಮೋಟಾರು ಕಾರುಗಳ ಚಾಲಕರು ಮತ್ತು ಕ್ಲೀನರ್‌ಗಳ ಸಂಬಳ ಮತ್ತು ಭತ್ಯೆಗಳು ಹಾಗೂ ದರಗಳು ಮತ್ತು ತೆರಿಗೆಗಳು ಹಾಗೂ ಅಂಥ ವಾಸದ ಮನೆಗೆ ಸೇರಿದ ತೋಟಗಳ ರೂಪರೇಷೆ ಮತ್ತು ಅದರ ನಿರ್ವಹಣೆ- ಈ ಎಲ್ಲ ಇತರ ವೆಚ್ಚಗಳನ್ನು ರಾಜ್ಯ ಸರ್ಕಾರವು ಭರಿಸತಕ್ಕದ್ದು.

**10ಜೆ. ಸರ್ಕಾರಿ ಮುಖ್ಯ ಸಚೇತಕರಿಗೆ ಸಂಬಳ:–** ಪ್ರತಿಯೊಬ್ಬ ಸರ್ಕಾರಿ ಮುಖ್ಯ ಸಚೇತಕರಿಗೆ ತಿಂಗಳಿಗೆ [6][ನಾಲ್ಕು ಸಾವಿರ ರೂಪಾಯಿಗಳ][6] ಸಂಬಳವನ್ನು ಸಂದಾಯ ಮಾಡತಕ್ಕದ್ದು.

**10ಕೆ. ಸರ್ಕಾರಿ ಮುಖ್ಯ ಸಚೇತಕರಿಗೆ ವಾಸದ ಮನೆ:–** (1) ಪ್ರತಿಯೊಬ್ಬ ಸರ್ಕಾರಿ ಮುಖ್ಯ ಸಚೇತಕರಿಗೆ ಅವರ ಅಧಿಕಾರದ ಅವಧಿ ಮತ್ತು ಅದರ ನಿಕಟ ತರುವಾಯದ [5][ಅರವತ್ತು ದಿವಸಗಳ][5] ಅವಧಿಗಾಗಿ ಬೆಂಗಳೂರು ನಗರ [7][ಅಥವಾ ಬೆಂಗಳೂರು ನಗರದ ಪರಿಮಿತಿಯಿಂದ ಮೂವತ್ತು ಕಿಲೋಮೀಟರು ಒಳಗೆ][7] ಒಂದು ಸುಸಜ್ಜಿತ ವಾಸದ ಮನೆಯನ್ನು ಬಳಸಲು [8][xxx][8] ಹಕ್ಕುಳ್ಳವರಾಗಿರತಕ್ಕದ್ದು. ಅಂಥ ಸುಸಜ್ಜಿತ ಮನೆಗೆ ಬದಲಾಗಿ ತಿಂಗಳಿಗೆ [9][ಹತ್ತು ಸಾವಿರ ರೂಪಾಯಿಗಳ][9] ದರದಲ್ಲಿ ಮನೆ ಬಾಡಿಗೆ ಭತ್ಯೆ ಪಡೆಯಲು ಹಕ್ಕುಳ್ಳವನಾಗಿರತಕ್ಕದ್ದು. [10][ಈ ಉಪ-ಪ್ರಕರಣದ ಮೇರೆಗೆ ಒದಗಿಸಲಾದ ವಾಸದ ಮನೆಯು ನಿಯಮಿಸಲಾದಂಥ ಶ್ರೇಣಿಗಳಲ್ಲಿ ಸುಸಜ್ಜಿತಗೊಂಡಿರತಕ್ಕದ್ದು ಮತ್ತು ಅದರ ಮೇಲ್ವಾಯವು ನಿಯಮಿಸಲಾದಂಥ ಪರಿಮಿತಿಗಳನ್ನು ಮೀರತಕ್ಕದ್ದಲ್ಲ][10]:

---

1. 1994ರ ಅಧಿನಿಯಮ ಸಂಖ್ಯೆ 5ರ ಮೂಲಕ 1.9.1993 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
2. 1997ರ ಅಧಿನಿಯಮ ಸಂಖ್ಯೆ 19ರ ಮೂಲಕ 1.9.1997 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
3. 1991ರ ಅಧಿನಿಯಮ ಸಂಖ್ಯೆ 5ರ ಮೂಲಕ 1.11.1990 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
4. 1978ರ ಅಧಿನಿಯಮ ಸಂಖ್ಯೆ 31ರ ಮೂಲಕ 26ನೇ ಡಿಸೆಂಬರ್ 1978 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.
5. 1978ರ ಅಧಿನಿಯಮ ಸಂಖ್ಯೆ 31ರ ಮೂಲಕ 19ನೇ ಜುಲೈ 1976 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ
6. 1994ರ ಅಧಿನಿಯಮ ಸಂಖ್ಯೆ 5ರ ಮೂಲಕ 1ನೇ ಸೆಪ್ಟೆಂಬರ್ 1990 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
7. 1994ರ ಅಧಿನಿಯಮ ಸಂಖ್ಯೆ 5ರ ಮೂಲಕ 1-9-93 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
8. 1978ರ ಅಧಿನಿಯಮ ಸಂಖ್ಯೆ 31ರ ಮೂಲಕ 19.7.1976 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.
9. 2001ರ ಅಧಿನಿಯಮ ಸಂಖ್ಯೆ 14ರ ಮೂಲಕ 1.12.2000 ದಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
10. 1979ರ ಅಧಿನಿಯಮ ಸಂಖ್ಯೆ 5ರ ಮೂಲಕ 27.12.1978 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

ಪರಂತು, ಸರ್ಕಾರಿ ಮುಖ್ಯ ಸಚೇತಕನು ಮೇಲೆ ಹೇಳಲಾದ ಸೌಲಭ್ಯವನ್ನು ಪಡೆದುಕೊಳ್ಳಲು ಇಚ್ಛಿಸದಿದ್ದಲ್ಲಿ ಆ ಬಗ್ಗೆ ರಾಜ್ಯ ಸರ್ಕಾರಕ್ಕೆ ಮಾಹಿತಿ ನೀಡಬಹುದು ಮತ್ತು ಹಾಗೆ ನೀಡಲಾದ ಮಾಹಿತಿಯನ್ನು ಯಾವುದೇ ಕಾಲದಲ್ಲಾಗಲಿ ರದ್ದುಪಡಿಸತಕ್ಕದ್ದು.

(2) ಸುಸಜ್ಜಿತ ವಾಸದ ಮನೆಗೆ ಬದಲಾಗಿ ಮನೆ ಬಾಡಿಗೆ ಭತ್ಯಕ್ಕೆ ಹಕ್ಕುಳ್ಳ ಸರ್ಕಾರಿ ಮುಖ್ಯ ಸಚೇತಕನು ಬಳಸುವ ವಾಸದ ಮನೆಯಲ್ಲಿ ಸರ್ಕಾರಿ ಉದ್ದೇಶಗಳಿಗಾಗಿ ಬಳಸಲು, ನಿಯಮಿಸಲಾದಂಥ ಶ್ರೇಣಿಗಳಲ್ಲಿ ರಾಜ್ಯ ಸರ್ಕಾರವು ಮೂರು ಕೊಠಡಿಗಳನ್ನು ಸುಸಜ್ಜಿತಗೊಳಿಸತಕ್ಕದ್ದು. [1][ವಾಸದ ಮನೆಯ ನಿರ್ವಹಣೆ ಹಾಗೂ ಅದನ್ನು ಸುಸ್ಥಿತಿಯಲ್ಲಿಡಲು ಮತ್ತು ಅಂಥ ವಾಸದ ಮನೆಗೆ ಸೇರಿದ ತೋಟದ ರೂಪರೇಷೆ ಹಾಗೂ ನಿರ್ವಹಣೆಗಾಗಿ ತಿಂಗಳಿಗೆ ಐದು ಸಾವಿರ ರೂಪಾಯಿಗಳ ಭತ್ಯಕ್ಕೆ ಅವರು ಹಕ್ಕುಳ್ಳವರಾಗಿರತಕ್ಕದ್ದು.][1]

**10ಎಲ್. ಸರ್ಕಾರಿ ಮುಖ್ಯ ಸಚೇತಕರಿಗೆ ವಾಹನ ಸೌಲಭ್ಯ:-** (1) ರಾಜ್ಯ ಸರ್ಕಾರವು ಪ್ರತಿ ಸರ್ಕಾರಿ ಮುಖ್ಯ ಸಚೇತಕರಿಗೆ, ಅವರ ಬಳಕೆಗಾಗಿ ಒಂದು ಸೂಕ್ತ ಮೋಟಾರು ಕಾರನ್ನು ಒದಗಿಸತಕ್ಕದ್ದು.

(2) ಪ್ರತಿಯೊಬ್ಬ ಸರ್ಕಾರಿ ಮುಖ್ಯ ಸಚೇತಕನಿಗೆ ಸರ್ಕಾರವು ಪ್ರತಿ ತಿಂಗಳು [2][ಐದು ನೂರು ಲೀಟರ್][2] [3][ಪೆಟ್ರೋಲ್ ಬೆಲೆಗೆ ಸಮನಾದ][3] ವಾಹನ ಭತ್ಯವನ್ನು ಸಂದಾಯ ಮಾಡತಕ್ಕದ್ದು.][6]

[4][**10ಎಂ.** XXX][4]

**10ಎನ್. ಸರ್ಕಾರಿ ಮುಖ್ಯ ಸಚೇತಕ ಮತ್ತು ಸರ್ಕಾರವು ಸಂದಾಯ ಮಾಡಬೇಕಾದ ವೆಚ್ಚಗಳು:-** (1) ಪ್ರತಿಯೊಬ್ಬ ಸರ್ಕಾರಿ ಮುಖ್ಯ ಸಚೇತಕ 10ಕೆ ಪ್ರಕರಣದ (1)ನೇ ಉಪ-ಪ್ರಕರಣ ಮತ್ತು 10ಎಲ್ ಪ್ರಕರಣದ ಮೇರೆಗೆ, ಅವರಿಗೆ ಹಂಚಿಕೆ ಮಾಡಲಾದ ವಾಸದ ಮನೆ ಮತ್ತು ಮೋಟಾರು ಕಾರಿನ ಸಂಬಂಧದಲ್ಲಿ ಈ ಕೆಳಗೆ ತಿಳಿಸಿದ ವೆಚ್ಚಗಳನ್ನು ಸಂದಾಯಮಾಡಲು ಬದ್ಧರಾಗಿರತಕ್ಕದ್ದು, ಎಂದರೆ:-

[3][(ಎ) ಸರ್ಕಾರವು ಸಂದಾಯ ಮಾಡಿದ [2][ಐದು ನೂರು ಲೀಟರ್][2] ಪೆಟ್ರೋಲ್ ಬೆಲೆಗಿಂತ ಹೆಚ್ಚಾಗಿ ತಮ್ಮ ಮೋಟಾರು ಕಾರುಗಳಿಗೆ ಬಳಸಿದ ಪೆಟ್ರೋಲ್ ವೆಚ್ಚ ; ಮತ್ತು][3]

[5][(ಬಿ) ವಾಸದ ಮನೆಯಲ್ಲಿನ ವಿದ್ಯುಚ್ಛಕ್ತಿ ಮತ್ತು ನೀರಿನ ಬಳಕೆ ಸಂಬಂಧದಲ್ಲಿ ಒಟ್ಟು ಮಾಸಿಕ ದರದ ಮೊದಲ ಎರಡು ನೂರು ರೂಪಾಯಿಗಳು.][5]

(2) 10ಕೆ. ಪ್ರಕರಣದ (1)ನೇ ಉಪ-ಪ್ರಕರಣದ ಮೇರೆಗೆ ಒದಗಿಸಲಾದ ವಾಸದ ಮನೆ ಮತ್ತು 10ಎಲ್ ಪ್ರಕರಣದ ಮೇರೆಗೆ ಒದಗಿಸಲಾದ ಮೋಟಾರು ಕಾರಿನ ದುರಸ್ತಿ ಖರ್ಚು ಸೇರಿದಂತೆ- ಅವುಗಳ ನಿರ್ವಹಣೆ ಹಾಗೂ ಅವುಗಳನ್ನು ಸುಸ್ಥಿತಿಯಲ್ಲಿಡಲು ಅಂಥ ಮೋಟಾರು ಕಾರುಗಳ ಚಾಲಕರು ಮತ್ತು ಕ್ಲೀನರ್‌ಗಳ ಸಂಬಳ ಮತ್ತು ಭತ್ಯೆಗಳು ಹಾಗೂ ಅದರ ದರಗಳು ಮತ್ತು ತೆರಿಗೆಗಳು ಹಾಗೂ ಅಂಥ ವಾಸದ ಮನೆಗೆ ಸೇರಿದ ತೋಟಗಳ ರೂಪರೇಷೆ ಮತ್ತು ಅವುಗಳ ನಿರ್ವಹಣೆ - ಈ ಎಲ್ಲ ಇತರೆ ವೆಚ್ಚಗಳನ್ನು ರಾಜ್ಯ ಸರ್ಕಾರವು ಭರಿಸತಕ್ಕದ್ದು.][4]

[6][**10ಓ. ಸಚೇತಕರಿಗೆ ಅಧಿನಿಯಮದ ಅನ್ವಯ:-** ಒಬ್ಬ ಸಚಿವ ಅಥವಾ ರಾಜ್ಯ ಸಚಿವ ಅಥವಾ ಉಪ-ಸಚಿವನನ್ನು ಸರ್ಕಾರಿ ಮುಖ್ಯ ಸಚೇತಕನನ್ನಾಗಿ ನೇಮಕಮಾಡಿದರೆ ಈ ಅಧಿನಿಯಮದಲ್ಲಿ ನಿರ್ದಿಷ್ಟಪಡಿಸಿದ ಯಾವುದೇ ಸಂಬಳ ಅಥವಾ ಭತ್ಯೆಗಳಿಗೆ ಅವನು ಹಕ್ಕುಳ್ಳವನಾಗಿರತಕ್ಕದ್ದಲ್ಲ ಮತ್ತು ಅವನಿಗೆ ಕರ್ನಾಟಕ ಸಚಿವರ ಸಂಬಳಗಳು ಮತ್ತು ಭತ್ಯೆಗಳ ಅಧಿನಿಯಮ, 1956ರ ಉಪಬಂಧಗಳು ಅನ್ವಯವಾಗತಕ್ಕದ್ದು.

**10ಪಿ. ಕೆಲವು ಇತರ ಸಂದರ್ಭಗಳಲ್ಲಿ ವಿದ್ಯುಚ್ಛಕ್ತಿ ಮತ್ತು ನೀರಿನ ಶುಲ್ಕವನ್ನು ಸರ್ಕಾರವು ಭರಿಸುವುದು:-** ವಾಸದ ಮನೆಯ ಸಂಬಂಧದಲ್ಲಿ ಸುಸಜ್ಜಿತ ವಾಸದ ಮನೆ ಸೌಲಭ್ಯ ಪಡೆದುಕೊಳ್ಳುವ ಸಭಾಪತಿ, ಸಭಾಧ್ಯಕ್ಷ, ಉಪ-ಸಭಾಪತಿ, ಉಪ-ಸಭಾಧ್ಯಕ್ಷ, ವಿರೋಧ ಪಕ್ಷದ ನಾಯಕ ಮತ್ತು ಸರ್ಕಾರಿ ಮುಖ್ಯ ಸಚೇತಕ- ಇವರು ತಮ್ಮ ವಾಸದ ಮನೆಯಲ್ಲಿ ಬಳಸುವ ವಿದ್ಯುಚ್ಛಕ್ತಿ ಮತ್ತು ನೀರು ಇವೆರಡೂ ಸೇರಿ, ಎರಡು ನೂರು ರೂಪಾಯಿಗಳನ್ನು ಮೀರಿ ಆದ ಮಾಸಿಕ ವೆಚ್ಚವನ್ನು ರಾಜ್ಯ ಸರ್ಕಾರವು ಭರಿಸತಕ್ಕದ್ದು.

**10ಕ್ಯೂ. ಮನೆ ಬಾಡಿಗೆ ಸಂಬಂಧದಲ್ಲಿ ಕಡಿತಗಳು ಇತ್ಯಾದಿ:-** ಸಭಾಪತಿ, ಸಭಾಧ್ಯಕ್ಷ, ಉಪ-ಸಭಾಪತಿ, ಉಪ-ಸಭಾಧ್ಯಕ್ಷ ವಿರೋಧ ಪಕ್ಷದ ನಾಯಕ ಮತ್ತು ಸರ್ಕಾರಿ ಮುಖ್ಯ ಸಚೇತಕನಿಗೆ ಸಂದಾಯಮಾಡುವ ಸಂಬಳದಿಂದ ಪ್ರತಿ ತಿಂಗಳು ಈ ಕೆಳಕಂಡ ಮೊಬಲಗನ್ನು ಕಡಿತಗೊಳಿಸತಕ್ಕದ್ದು, ಎಂದರೆ,-

1. 1994ರ ಅಧಿನಿಯಮ ಸಂಖ್ಯೆ 5ರ ಮೂಲಕ 1-9-1993 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
2. 1997ರ ಅಧಿನಿಯಮ ಸಂಖ್ಯೆ 19ರ ಮೂಲಕ 1.9.1997 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
3. 1991ರ ಅಧಿನಿಯಮ ಸಂಖ್ಯೆ 5ರ ಮೂಲಕ 1-11-1990 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
4. 1978ರ ಅಧಿನಿಯಮ ಸಂಖ್ಯೆ 31ರ ಮೂಲಕ 26.12.1978 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.
5. 1978ರ ಅಧಿನಿಯಮ ಸಂಖ್ಯೆ 31ರ ಮೂಲಕ 19.7.1976 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
6. 1978ರ ಅಧಿನಿಯಮ ಸಂಖ್ಯೆ 31ರ ಮೂಲಕ 23-3-1972 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(ಎ) ಅವರು ರಾಜ್ಯ ಸರ್ಕಾರವು ಒದಗಿಸಿದ ವಾಸದ ಮನೆಯಲ್ಲಿ ವಾಸಿಸುತ್ತಿದ್ದರೆ ಮನೆ ಬಾಡಿಗೆಯಾಗಿ ಅವರ ಸಂಬಳದ ಶೇಕಡಾ 10 ರಷ್ಟಕ್ಕೆ ಸಮನಾದ ಮೊಬಲಗು;

(ಬಿ) ಅವರ ವಾಸದ ಮನೆಯನ್ನು ರಾಜ್ಯ ಸರ್ಕಾರವು ಸುಸಜ್ಜಿತಗೊಳಿಸಿದ್ದರೆ, ಆ ಸಂಬಂಧ ಬಾಡಿಗೆಯಾಗಿ ಅವರ ಸಂಬಳದ ಶೇಕಡಾ ಎರಡೂವರೆಯಷ್ಟಕ್ಕೆ ಸಮನಾದ ಮೊಬಲಗು.][6]

**11. ವಿಧಾನಸಭೆ ಮತ್ತು ವಿಧಾನ ಪರಿಷತ್ತಿನ ಸದಸ್ಯರ [1][[2][xxx][2] ಸಂಬಳ][1]:-** [3][(1)][3] ವಿಧಾನ ಸಭೆ ಅಥವಾ ವಿಧಾನ ಪರಿಷತ್ತಿನ ಪ್ರತಿಯೊಬ್ಬ ಸದಸ್ಯನಿಗೆ [4][ತಿಂಗಳಿಗೆ [5][ನಾಲ್ಕು ಸಾವಿರ ರೂಪಾಯಿಗಳ][5] ಸಂಬಳವನ್ನು][4] ಸಂದಾಯ ಮಾಡತಕ್ಕದ್ದು. ಆ ಸಂಬಳವು ಅವರನ್ನು ಕ್ರಮಬದ್ಧವಾಗಿ ಚುನಾಯಿಸಲಾಗಿದೆ ಎಂದು ಘೋಷಿಸಿದ ದಿನಾಂಕದಿಂದ ಅವರಿಗೆ ಪ್ರಾಪ್ತವಾಗತಕ್ಕದ್ದು ಅಥವಾ ವಿಧಾನ ಸಭೆ ಅಥವಾ ವಿಧಾನ ಪರಿಷತ್ತಿನಲ್ಲಿ ಖಾಲಿ ಸ್ಥಾನವನ್ನು ತುಂಬಲು ರಾಜ್ಯಪಾಲರಿಂದ ನಾಮನಿರ್ದೇಶನ ಮಾಡಿದ ಸದಸ್ಯರ ಸಂದರ್ಭದಲ್ಲಿ ಅವರನ್ನು ಹಾಗೆ ನಾಮನಿರ್ದೇಶನ ಮಾಡಿದ ದಿನಾಂಕದಿಂದ ಅಥವಾ ಖಾಲಿ ಸ್ಥಾನವು ಉಂಟಾಗುವ ಮೊದಲೇ ಅಂಥ ಘೋಷಣೆ ಅಥವಾ ನಾಮನಿರ್ದೇಶನ ಮಾಡಿದ್ದರೆ ಆ ಖಾಲಿ ಸ್ಥಾನವು ಉಂಟಾದ ದಿನಾಂಕದಿಂದ ಅಂಥ ಸಂಬಳವು ಪ್ರಾಪ್ತವಾಗತಕ್ಕದ್ದು:

ಪರಂತು, ಆ ಸಂಬಳವನ್ನು, [2][xxx][2] ಭಾರತ ಸಂವಿಧಾನದ 188ನೇ ಅನುಚ್ಛೇದದಲ್ಲಿ ಉಲ್ಲೇಖಿಸಲಾದ ಪ್ರಮಾಣ ವಚನ ಅಥವಾ ಸತ್ಯ ದೃಢೀಕರಣವನ್ನು ಆ ಸದಸ್ಯನು ಮಾಡಿ ಅದಕ್ಕೆ ರುಜುಮಾಡುವವರೆಗೆ ಸಂದಾಯ ಮಾಡತಕ್ಕದ್ದಲ್ಲ:

[6][ಮತ್ತೂ ಪರಂತು,-

(i) ಸಾರ್ವಜನಿಕ ಚುನಾವಣೆಯ ತರುವಾಯ ರಚಿಸಲಾದ ನೂತನ ವಿಧಾನಸಭೆ ಸದಸ್ಯನ ಸಂದರ್ಭದಲ್ಲಿ ಸಂಬಳವನ್ನು [2][xxx][2] ಆ ವಿಧಾನಸಭೆಯ ಅವಧಿಯ ಪ್ರಾರಂಭದ ದಿನಾಂಕದಿಂದ ಮಾತ್ರ ಸಂದಾಯಮಾಡತಕ್ಕದ್ದು ಅಥವಾ ಹಿಂದಿನ ವಿಧಾನಸಭೆಯನ್ನು ಮೇಲೆ ಹೇಳಲಾದ ದಿನಾಂಕದ ಮೊದಲೇ ವಿಸರ್ಜನೆ ಮಾಡಲಾಗಿದ್ದರೆ ಅಂಥ ವಿಸರ್ಜನೆಯ ದಿನಾಂಕದಿಂದ ಮಾತ್ರ ಸಂದಾಯ ಮಾಡತಕ್ಕದ್ದು; ಮತ್ತು

(ii) ವಿಧಾನ ಪರಿಷತ್ತಿನ ಸದಸ್ಯನ ಸಂದರ್ಭದಲ್ಲಿ ಸಂಬಳವನ್ನು [2][xxx][2] ಸದರಿ ಪರಿಷತ್ತಿನ ಸದಸ್ಯನಾಗಿ ಆತನ ಅಧಿಕಾರಾವಧಿ ಪ್ರಾರಂಭವಾದ ದಿನಾಂಕದಿಂದ ಮಾತ್ರ ಸಂದಾಯ ಮಾಡತಕ್ಕದ್ದು:][6]

[7][ಪರಂತು, ವಿಧಾನಸಭೆ ಅಥವಾ ವಿಧಾನ ಪರಿಷತ್ತಿನಲ್ಲಿ ಈಗಾಗಲೇ ಸದಸ್ಯನಾಗಿರುವ ವ್ಯಕ್ತಿ ವಿಧಾನ ಪರಿಷತ್ ಅಥವಾ ವಿಧಾನ ಸಭೆಯ ಸದಸ್ಯನಾಗಿ ಆಯ್ಕೆ ಅಥವಾ ನಾಮನಿರ್ದೇಶನ ಗೊಂಡಿರುವಾಗ, ಸಂದರ್ಭಾನುಸಾರ ಆತನ ವಿಧಾನಸಭೆ ಅಥವಾ ವಿಧಾನ ಪರಿಷತ್ತಿನ ಸದಸ್ಯತ್ವವು ಕೊನೆಗೊಂಡ ದಿನಾಂಕದಿಂದ ಮಾತ್ರ ವಿಧಾನ ಪರಿಷತ್ ಅಥವಾ ವಿಧಾನಸಭಾ ಸದಸ್ಯನಾಗಿ ಸಂಬಳವನ್ನು [2][xxx][2] ಆತನಿಗೆ ಸಂದಾಯ ಮಾಡತಕ್ಕದ್ದು.][7]

[8][(2) (1)ನೇ ಉಪ-ಪ್ರಕರಣದ ಮೇರೆಗೆ ಯಾವುದೇ ಸಂಬಳಕ್ಕೆ [2][xxx][2] ಹಕ್ಕುದಾರರಾದ ಯಾರೇ ಸದಸ್ಯನು, ವಿಧಾನಸಭಾ ಸದಸ್ಯನಾಗಿದ್ದರೆ ಸಭಾಧ್ಯಕ್ಷರಿಗೆ ಮತ್ತು ವಿಧಾನ ಪರಿಷತ್‌ನ ಸದಸ್ಯನಾಗಿದ್ದರೆ ಸಭಾಪತಿಗೆ ಲಿಖಿತದಲ್ಲಿ ತಿಳಿಸುವ ಮೂಲಕ ಯಾವುದೇ ಸಮಯದಲ್ಲಿ ಅದರ ಪೂರ್ಣ ಭಾಗವನ್ನು ಅಥವಾ ಯಾವುದೇ ಭಾಗವನ್ನು ಬಿಟ್ಟುಕೊಡಬಹುದು:

ಪರಂತು, ಯಾವುದೇ ಸಂಬಳದ ಸಂಬಂಧದಲ್ಲಿ [2][xxx][2] ಸದಸ್ಯರೊಬ್ಬರು ಒಬ್ಬ ಸದಸ್ಯನು ಹಾಗೆ ಬಿಟ್ಟು ಕೊಟ್ಟಿರುವುದನ್ನು ಸಭಾಧ್ಯಕ್ಷ ಅಥವಾ ಸಭಾಪತಿಗೆ ಲಿಖಿತದ ಮೂಲಕ ತಿಳಿಸಿ ಯಾವುದೇ ಸಮಯದಲ್ಲಿ ಉತ್ತರಾನ್ವಯವಾಗಿ ಅದನ್ನು ಅವರು ರದ್ದುಪಡಿಸಬಹುದು.][8]

[9][**11ಎ. ಸದಸ್ಯರಿಗೆ ನಿವೃತ್ತಿ ವೇತನ ಇತ್ಯಾದಿ:-** (1) ಕರ್ನಾಟಕ ವಿಧಾನ ಮಂಡಲ ಸಂಬಳಗಳ (ತಿದ್ದುಪಡಿ) ಅಧಿನಿಯಮ, 1978ರ 1ನೇ ಪ್ರಕರಣವು ಪ್ರಾರಂಭವಾದ ದಿನಾಂಕದಿಂದ ಜಾರಿಗೆ ಬರುವಂತೆ ಈ ಕೆಳಕಂಡ [10][ಪ್ರತಿಯೊಬ್ಬ ವ್ಯಕ್ತಿ, ಎಂದರೆ,-

(ಎ) 1952ರ ಜನವರಿ ಮೊದಲನೇ ದಿನದ ತರುವಾಯ][10],-

(i) ವಿಧಾನ ಪರಿಷತ್‌ನ ಸದಸ್ಯನಾಗಿ; ಅಥವಾ

---

1. 1960ರ ಅಧಿನಿಯಮ ಸಂಖ್ಯೆ 10ರ ಮೂಲಕ 1-1-1960 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
2. 1978ರ ಅಧಿನಿಯಮ ಸಂಖ್ಯೆ 31ರ ಮೂಲಕ 1-4-1978 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.
3. 1967ರ ಅಧಿನಿಯಮ ಸಂಖ್ಯೆ 8ರ ಮೂಲಕ 10-8-1967 ರಿಂದ ಜಾರಿಗೆ ಬರುವಂತೆ ಪುನಃ ಸಂಖ್ಯೆ ನೀಡಲಾಗಿದೆ.
4. 1978ರ ಅಧಿನಿಯಮ ಸಂಖ್ಯೆ 31ರ ಮೂಲಕ 1.4.1978 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
5. 2001ರ ಅಧಿನಿಯಮ ಸಂಖ್ಯೆ 14ರ ಮೂಲಕ 1-12-2000 ದಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
6. 1957ರ ಅಧಿನಿಯಮ ಸಂಖ್ಯೆ 17ರ ಮೂಲಕ 1.11.1956 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
7. 1960ರ ಅಧಿನಿಯಮ ಸಂಖ್ಯೆ 10ರ ಮೂಲಕ 1.1.1960 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
8. 1967ರ ಅಧಿನಿಯಮ ಸಂಖ್ಯೆ 8ರ ಮೂಲಕ 10.8.1967 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
9. 1978ರ ಅಧಿನಿಯಮ ಸಂಖ್ಯೆ 31ರ ಮೂಲಕ 26.12.1978 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
10. 1984ರ ಅಧಿನಿಯಮ ಸಂಖ್ಯೆ 22ರ ಮೂಲಕ 26.12.1978 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ii) ವಿಧಾನಸಭಾ ಸದಸ್ಯನಾಗಿ; ಅಥವಾ

(iii) ವಿಧಾನ ಸಭಾ ಸದಸ್ಯನಾಗಿ ಭಾಗಶ: ಮತ್ತು ವಿಧಾನ ಪರಿಷತ್‌ನ ಸದಸ್ಯನಾಗಿ ಭಾಗಶ: ಸೇವೆ ಸಲ್ಲಿಸಿರುವವನಿಗೆ ಅವನ ಜೀವಿತದ ಉಳಿದ ಅವಧಿಗೆ ಪ್ರತಿ ತಿಂಗಳು [1][ಮೂರು ಸಾವಿರ][1] ರೂಪಾಯಿಗಳ ನಿವೃತ್ತಿ ವೇತನ ಸಂದಾಯವಾಗತಕ್ಕದ್ದು;

[2][ಪರಂತು, ಯಾರೇ ವ್ಯಕ್ತಿ ಮೇಲೆ ಹೇಳಲಾದ ರೀತಿಯಲ್ಲಿ ಐದು ವರ್ಷಗಳಿಗಿಂತ ಹೆಚ್ಚಿನ ಅವಧಿಗಾಗಿ ಸೇವೆ ಸಲ್ಲಿಸಿದ್ದರೆ ಅವನಿಗೆ ಆ ತರುವಾಯದ ಪೂರ್ಣಗೊಂಡ ಪ್ರತಿ ವರ್ಷಕ್ಕೆ ತಿಂಗಳಿಗೆ [1][ಐದು ಸಾವಿರ ರೂಪಾಯಿಗಳ][1] ಗರಿಷ್ಠ ನಿವೃತ್ತಿ ವೇತನಕ್ಕೆ ಒಳಪಟ್ಟು ಪ್ರತಿ ತಿಂಗಳು ಹೆಚ್ಚುವರಿ ನಿವೃತ್ತಿ ವೇತನವಾಗಿ [1][ಮೂರು ನೂರು][1] ರೂಪಾಯಿ ಸಂದಾಯವಾಗತಕ್ಕದ್ದು:][2]

ಮತ್ತೂ ಪರಂತು, ವಿಧಾನ ಸಭೆಯ ವಿಸರ್ಜನೆಯ ಕಾರಣದಿಂದಾಗಿ ಐದು ವರ್ಷಗಳು ಸೇವೆ ಸಲ್ಲಿಸದಂತೆ ಒಬ್ಬ ಸದಸ್ಯನು ಪ್ರತಿಬಂಧಿತನಾಗಿದ್ದರೆ, ಅವನು ಸದಸ್ಯನಾಗಿ ಐದು ವರ್ಷ ಸೇವೆ ಸಲ್ಲಿಸಿರುವುದಾಗಿ ಭಾವಿಸತಕ್ಕದ್ದು:

[3][ಅಲ್ಲದೆ ಪರಂತು, ಒಬ್ಬ ವ್ಯಕ್ತಿಯು ಮೊದಲು ವಿಧಾನ ಪರಿಷತ್ತಿನ ಸದಸ್ಯನಾಗಿದ್ದು ಅವನು ತನ್ನ ಆರು ವರ್ಷಗಳ ಪೂರ್ಣ ಅಧಿಕಾರಾವಧಿಯ ಸೇವೆ ಸಲ್ಲಿಸುವ ಮೊದಲೇ ಚೀಟಿ ಮೂಲಕ ಅವನ ಅಧಿಕಾರಾವಧಿ ಮುಕ್ತಾಯವಾಗಿದ್ದರೆ, ಅವನು ಧಾರಣಮಾಡಿದ್ದ ಅಧಿಕಾರದ ಅವಧಿಯನ್ನು ಗಣನೆಗೆ ತೆಗೆದುಕೊಳ್ಳದೆ ಅವನು ಐದು ವರ್ಷಗಳ ಸೇವೆ ಸಲ್ಲಿಸಿರುವುದಾಗಿ ಭಾವಿಸತಕ್ಕದ್ದು:

ಪರಂತು, ವ್ಯಕ್ತಿಯು ಚುನಾವಣಾ ಅರ್ಜಿಯಲ್ಲಿ ನ್ಯಾಯಾಲಯದಿಂದ ಚುನಾಯಿತ ನೆಂದು ಘೋಷಿತನಾಗಿರುವಾಗ ಮತ್ತು ಚುನಾವಣಾ ಅರ್ಜಿಯು ಇತ್ಯರ್ಥದಲ್ಲಿದ್ದ ಕಾಲದಲ್ಲಿ ಸದಸ್ಯನಾಗಿ ಸೇವೆ ಸಲ್ಲಿಸಲು ಅವನಿಗೆ ಸಾಧ್ಯವಾಗದಿದ್ದಾಗ ಅವನು ವಾಸ್ತವವಾಗಿ ಸಲ್ಲಿಸಿದ್ದ ಸೇವೆಯ ಅವಧಿಯನ್ನು ಗಣನೆಗೆ ತೆಗೆದುಕೊಳ್ಳದೆ ಸದಸ್ಯನಾಗಿ ಅವನು ಐದು ವರ್ಷಗಳ ಕಾಲ ಸೇವೆ ಸಲ್ಲಿಸಿರುವುದಾಗಿ ಭಾವಿಸತಕ್ಕದ್ದು:

ಪರಂತು, ಒಬ್ಬ ವ್ಯಕ್ತಿಯು, ಉಪ-ಚುನಾವಣೆಯಲ್ಲಿ ಚುನಾಯಿತನಾಗಿರುವನೆಂದು ಘೋಷಿತನಾಗಿದ್ದರೆ ಅಥವಾ ಅಧಿಕಾರಾವಧಿಯ [4][ಮಧ್ಯದಲ್ಲಿ ಸದಸ್ಯನೆಂದು ನಾಮನಿರ್ದೇಶನ ಗೊಂಡಿದ್ದರೆ, ಮತ್ತು ಅವನಿಗೆ ಪೂರ್ಣಾವಧಿ ಸೇವೆ ಸಲ್ಲಿಸಲು ಸಾಧ್ಯವಾಗದಿದ್ದರೆ ಅವನು][4] ವಾಸ್ತವವಾಗಿ ಸಲ್ಲಿಸಿದ ಸೇವೆಯನ್ನು ಗಣನೆಗೆ ತೆಗೆದುಕೊಳ್ಳದೆ ಐದು ವರ್ಷಗಳ ಸೇವೆ ಸಲ್ಲಿಸಿರುವುದಾಗಿ ಭಾವಿಸತಕ್ಕದ್ದು][3]:

[5][ಪರಂತು, ಮೂರು ವರ್ಷಗಳಿಗಿಂತಲೂ ಹೆಚ್ಚಿನ ಸೇವೆಯನ್ನು ಸಲ್ಲಿಸಿದ ತರುವಾಯ ಒಬ್ಬ ಸದಸ್ಯನು ರಾಜೀನಾಮೆ ಸಲ್ಲಿಸಿದರೆ, ಅವನು ಸದಸ್ಯನಾಗಿ ಐದು ವರ್ಷಗಳವರೆಗೆ ಸೇವೆ ಸಲ್ಲಿಸಿರುವುದಾಗಿ ಭಾವಿಸತಕ್ಕದ್ದು.][5]

**ವಿವರಣೆ:-** ಈ ಉಪ-ಪ್ರಕರಣದ ಉದ್ದೇಶಕ್ಕಾಗಿ, ವಿಧಾನ ಸಭೆ ಅಥವಾ ವಿಧಾನ ಪರಿಷತ್‌ನ ಸದಸ್ಯ ಎಂದರೆ, 1956ರ ನವೆಂಬರ್ ಒಂದನೇ ದಿನಾಂಕಕ್ಕೆ ಮೊದಲು ಒಬ್ಬ ವ್ಯಕ್ತಿಯು, ಸದರಿ ದಿನಾಂಕದಂದು ಮತ್ತು ಆ ತರುವಾಯ ನವ ಕರ್ನಾಟಕ ರಾಜ್ಯದ ಒಂದು ಭಾಗವಾಗಿ ಸೇರಿದ ಯಾವುದೇ ಪ್ರದೇಶವನ್ನು, ಸದರಿ ಪ್ರದೇಶವು ಆ ಹಿಂದೆ ತನ್ನ ಒಂದು ಭಾಗವಾಗಿದ್ದ ರಾಜ್ಯದ ವಿಧಾನಸಭೆ ಅಥವಾ ವಿಧಾನ ಪರಿಷತ್ತಿನ ಸದಸ್ಯನಾಗಿ ಪ್ರತಿನಿಧಿಸಿದ್ದರೆ ಆತನನ್ನೂ ಒಳಗೊಳ್ಳುತ್ತದೆ:

ಪರಂತು, ವಿಧಾನ ಸಭೆ ಅಥವಾ ವಿಧಾನ ಪರಿಷತ್ತಿನ ನಾಮ ನಿರ್ದೇಶಿತ ಸದಸ್ಯನ ಸಂದರ್ಭದಲ್ಲಿ, ವಿಧಾನಸಭೆ ಅಥವಾ ವಿಧಾನ ಪರಿಷತ್ತಿನ ಅವನ ಸದಸ್ಯತ್ವದ ಅವಧಿಯಲ್ಲಿ ಅವನು ಖಾಯಂ ಆಗಿ ಕರ್ನಾಟಕ ರಾಜ್ಯದ ಭಾಗವಾಗುವ ಯಾವುದೇ ಪ್ರದೇಶದಲ್ಲಿ ವಾಸವಾಗಿದ್ದರೆ ನಿವೃತ್ತಿ ವೇತನಕ್ಕೆ ಅರ್ಹನಾಗಿರತಕ್ಕದ್ದು.

[6][(ಬಿ) 1952ರ ಜನವರಿ ಒಂದನೇ ದಿನಾಂಕಕ್ಕೆ ಮೊದಲು,-

(ಎ) ರಾಜ್ಯಾಂಗ ರಚನಾ ಸಭೆಯ;

(ಬಿ) ಮೈಸೂರು ಪ್ರಜಾಪ್ರತಿನಿಧಿ ಸಭೆಯ ಸದಸ್ಯನಾಗಿರುವ;

(ಸಿ) ಮೈಸೂರು ವಿಧಾನ ಪರಿಷತ್ತಿನ ಸದಸ್ಯನಾಗಿರುವ;

(ಡಿ) ಯಾವುದೇ ರಾಜ್ಯದ (ಭಾರತದ ರಾಜಸಂಸ್ಥಾನಗಳನ್ನೂ ಒಳಗೊಂಡು) ಅಥವಾ ಪ್ರಾಂತ್ಯದ ಅಥವಾ ವಿಧಾನ ಪರಿಷತ್ತು - ಇವುಗಳ ಸದಸ್ಯನಾಗಿದ್ದು ಆ ಪ್ರದೇಶ ಅಥವಾ ಆ ಪ್ರದೇಶದ ಯಾವುದೇ ಭಾಗವು ಈಗ ಕರ್ನಾಟಕ ಭಾಗವಾಗಿದ್ದರೆ ಅಂಥ ಸದಸ್ಯನ ಸೇವಾ ಅವಧಿಯನ್ನು ಗಣನೆಗೆ ತೆಗೆದುಕೊಳ್ಳದೆ ಅವನು ಜೀವಿತದ ಉಳಿದ ಅವಧಿಗೆ ತಿಂಗಳಿಗೆ [7][ಒಂದು ಸಾವಿರದ ಇನ್ನೂರು ರೂಪಾಯಿಗಳ][7] ನಿವೃತ್ತಿ ವೇತನಕ್ಕೆ ಅರ್ಹನಾಗತಕ್ಕದ್ದು:

1. 2001ರ ಅಧಿನಿಯಮ ಸಂಖ್ಯೆ 14ರ ಮೂಲಕ 1.12.2000 ದಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
2. 1991ರ ಅಧಿನಿಯಮ ಸಂಖ್ಯೆ 5ರ ಮೂಲಕ 1.11.1990 ರಿಂದ ಜಾರಿಗೆ ಬರುವಂತೆ 1ನೇ ಮತ್ತು 2ನೇ ಪರಂತುಕಗಳನ್ನು ಪ್ರತಿಯೋಜಿಸಲಾಗಿದೆ.
3. 1982ರ ಅಧಿನಿಯಮ ಸಂಖ್ಯೆ 21ರ ಮೂಲಕ 26ನೇ ಡಿಸೆಂಬರ್ 1978 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
4. 1984ರ ಅಧಿನಿಯಮ ಸಂಖ್ಯೆ 22ರ ಮೂಲಕ 26.12.1978 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
5. 1994ರ ಅಧಿನಿಯಮ ಸಂಖ್ಯೆ 5ರ ಮೂಲಕ 1.9.1993 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
6. 1984ರ ಅಧಿನಿಯಮ ಸಂಖ್ಯೆ 22ರ ಮೂಲಕ 26ನೇ ಡಿಸೆಂಬರ್ 1978 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
7. 1994ರ ಅಧಿನಿಯಮ ಸಂಖ್ಯೆ 5ರ ಮೂಲಕ 1ನೇ ಸೆಪ್ಟೆಂಬರ್ 1993 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

ಪರಂತು, ಒಬ್ಬ ವ್ಯಕ್ತಿಗೆ, ಅವನು,-

(i) ಒಂದು ಪ್ರಾದೇಶಿಕ ಮತಕ್ಷೇತ್ರವನ್ನು ಪ್ರತಿನಿಧಿಸುವ ಒಬ್ಬ ಸದಸ್ಯನಾಗಿ ಸೇವೆ ಸಲ್ಲಿಸಿದ್ದರೆ ಅವನು ಈಗ ಕರ್ನಾಟಕ ರಾಜ್ಯದ ಒಂದು ಭಾಗವಾಗುವ ಯಾವುದೇ ಪ್ರದೇಶವನ್ನು ಪ್ರತಿನಿಧಿಸಿದ್ದ ಹೊರತು; ಮತ್ತು

(ii) ಯಾರೇ ಇತರ ಸದಸ್ಯನ ಸಂದರ್ಭದಲ್ಲಿ ಅವನು ತನ್ನ ಸದಸ್ಯತ್ವದ ಅವಧಿಯಲ್ಲಿ ಈಗ ಕರ್ನಾಟಕ ರಾಜ್ಯದ ಭಾಗವಾಗುವ ಯಾವುದೇ ಪ್ರದೇಶದಲ್ಲಿ ಶಾಶ್ವತವಾಗಿ ವಾಸವಾಗಿದ್ದ ಹೊರತು

-ಅಂಥ ಯಾವುದೇ ನಿವೃತ್ತಿ ವೇತನವು ಸಂದಾಯವಾಗತಕ್ಕದ್ದಲ್ಲ.][6]

[1][(1ಎ) (1)ನೇ ಉಪ-ಪ್ರಕರಣದ (ಎ) ಮತ್ತು (ಬಿ) ಖಂಡಗಳ ಮೇರೆಗೆ ಒಬ್ಬ ಸದಸ್ಯನಿಗೆ ಸಂದಾಯ ಮಾಡಬಹುದಾದ ನಿವೃತ್ತಿ ವೇತನದ ಒಟ್ಟು ಮೊತ್ತವು ಒಂದು ತಿಂಗಳಿಗೆ [2][ಐದು ಸಾವಿರ][2] ರೂಪಾಯಿಗಳನ್ನು ಮೀರತಕ್ಕದ್ದಲ್ಲ.][1]

(2) (1)ನೇ ಉಪ-ಪ್ರಕರಣದ ಮೇರೆಗೆ ನಿವೃತ್ತಿ ವೇತನಕ್ಕೆ ಹಕ್ಕುದಾರನಾಗಿರುವ ಯಾರೇ ವ್ಯಕ್ತಿಯು,-

(i) ಭಾರತದ ರಾಷ್ಟ್ರಪತಿ ಅಥವಾ ಉಪ-ರಾಷ್ಟ್ರಪತಿಯ ಪದವಿಗೆ ಚುನಾಯಿತನಾದರೆ ಅಥವಾ ಯಾವುದೇ ರಾಜ್ಯದ ರಾಜ್ಯಪಾಲರ ಅಥವಾ ಯಾವುದೇ ಕೇಂದ್ರಾಡಳಿತ ಪ್ರದೇಶದ ಆಡಳಿತಗಾರರ ಹುದ್ದೆಗೆ ನೇಮಕಗೊಂಡರೆ; ಅಥವಾ

(ii) ಸಚಿವ, ರಾಜ್ಯ ಸಚಿವ, ಉಪ ಸಚಿವ, ಸಭಾಪತಿ, ಸಭಾಧ್ಯಕ್ಷ, ಉಪ-ಸಭಾಪತಿ, ಉಪ-ಸಭಾಧ್ಯಕ್ಷ, ವಿರೋಧ ಪಕ್ಷದ ನಾಯಕ ಅಥವಾ ಸರ್ಕಾರಿ ಮುಖ್ಯ ಸಚೇತಕ -ಈ ಹುದ್ದೆಗೆ ನೇಮಕಗೊಂಡರೆ ಅಥವಾ ಚುನಾಯಿತನಾದರೆ; ಅಥವಾ

(iii) ರಾಜ್ಯಸಭೆ ಅಥವಾ ಲೋಕಸಭೆ ಅಥವಾ ಒಂದು ರಾಜ್ಯದ ಅಥವಾ ಕೇಂದ್ರಾಡಳಿತ ಪ್ರದೇಶದ ವಿಧಾನಸಭೆ ಅಥವಾ ರಾಜ್ಯದ ಯಾವುದೇ ವಿಧಾನ ಪರಿಷತ್ತಿನ ಸದಸ್ಯನಾದರೆ; ಅಥವಾ

(iv) ಯಾವುದೇ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ಯಾವುದೇ ರಾಜ್ಯ ಸರ್ಕಾರದ ಅಥವಾ ಕೇಂದ್ರ ಸರ್ಕಾರದ ಒಡೆತನದಲ್ಲಿರುವ ಅಥವಾ ಅದರ ನಿಯಂತ್ರಣದಲ್ಲಿರುವ ನಿಗಮ ಅಥವಾ ಯಾವುದೇ ಸ್ಥಳೀಯ ಪ್ರಾಧಿಕಾರದಲ್ಲಿ ಸಂಬಳದ ಮೇಲೆ ನಿಯೋಜಿತನಾದರೆ ಅಥವಾ ಅನ್ಯಥಾ ಅಂಥ ಸರ್ಕಾರ, ನಿಗಮ ಅಥವಾ ಸ್ಥಳೀಯ ಪ್ರಾಧಿಕಾರದಿಂದ ಯಾವುದೇ ಪರಿಶ್ರಮ ಧನಕ್ಕೆ ಯಾವುದೇ ಇತರ ರೀತಿಯಲ್ಲಿ ಹಕ್ಕುದಾರನಾದರೆ ಅಂಥ ವ್ಯಕ್ತಿಯು ಅಂಥ ಅಧಿಕಾರ ಹೊಂದಿರುವ ಅವಧಿಗಾಗಿ ಅಥವಾ ಅಂಥ ಸದಸ್ಯನಾಗಿರುವಾಗ ಅಥವಾ ಹಾಗೆ ನಿಯೋಜಿತನಾಗಿರುವಾಗ ಅಥವಾ ಅಂಥ ಪರಿಶ್ರಮಧನಕ್ಕೆ ಹಕ್ಕುದಾರನಾಗಿ ಮುಂದುವರಿಯುತ್ತಿರುವಾಗ, (1)ನೇ ಉಪ-ಪ್ರಕರಣದ ಮೇರೆಗೆ ಯಾವುದೇ ನಿವೃತ್ತಿ ವೇತನಕ್ಕೆ ಹಕ್ಕುಳ್ಳವನಾಗಿರತಕ್ಕದ್ದಲ್ಲ:

ಪರಂತು, ಅಂಥ ವ್ಯಕ್ತಿಗೆ ಅಂಥ ಅಧಿಕಾರ ಹೊಂದಿರುವುದಕ್ಕಾಗಿ ಅಥವಾ ಅಂಥ ಸದಸ್ಯನಾಗಿರುವುದಕ್ಕಾಗಿ ಅಥವಾ ಹಾಗೆ ನಿಯೋಜಿತನಾಗಿರುವುದಕ್ಕಾಗಿ ಸಂದಾಯ ಮಾಡಬಹುದಾದ ಸಂಬಳ ಅಥವಾ ಅಂಥ ವ್ಯಕ್ತಿಗೆ ಸಂದಾಯ ಮಾಡಬಹುದಾದ, (iv)ನೇ ಖಂಡದಲ್ಲಿ ಉಲ್ಲೇಖಿಸಿದ ಪರಿಶ್ರಮಧನವು ಎರಡೂ ಸಂದರ್ಭಗಳಲ್ಲಿ (1)ನೇ ಉಪ-ಪ್ರಕರಣದ ಮೇರೆಗೆ ಅವನಿಗೆ ಸಂದಾಯವಾಗತಕ್ಕ ನಿವೃತ್ತಿ ವೇತನಕ್ಕಿಂತ ಕಡಿಮೆ ಇದ್ದರೆ ಅಂಥ ವ್ಯಕ್ತಿಯು ಆ ಉಪ-ಪ್ರಕರಣದ ಮೇರೆಗೆ ಉಳಿದ ಭಾಗವನ್ನು ಮಾತ್ರ ನಿವೃತ್ತಿ ವೇತನವಾಗಿ ಪಡೆಯಲು ಹಕ್ಕುಳ್ಳವನಾಗಿರತಕ್ಕದ್ದು.

[3][(3) xxx][3]

(4) (1)ನೇ ಉಪ-ಪ್ರಕರಣದ ಉದ್ದೇಶಕ್ಕಾಗಿ ವರ್ಷಗಳ ಸಂಖ್ಯೆಯನ್ನು ಲೆಕ್ಕ ಹಾಕುವಾಗ, ವ್ಯಕ್ತಿಯು ಈ ಮುಂದಿನ ಸ್ಥಾನಗಳಲ್ಲಿ, ಎಂದರೆ (1) ಸಚಿವ, ರಾಜ್ಯ ಸಚಿವ, ಉಪ ಸಚಿವ, ಸಂಸದೀಯ ಕಾರ್ಯದರ್ಶಿ, ಸಭಾಪತಿ, ಸಭಾಧ್ಯಕ್ಷ, ವಿರೋಧ ಪಕ್ಷದ ನಾಯಕ, ವಿಧಾನ ಸಭೆಯ ಅಥವಾ ವಿಧಾನ ಪರಿಷತ್ತಿನ ಸದಸ್ಯತ್ವದ ಆಧಾರದ ಮೇಲೆ ಸರ್ಕಾರಿ ಮುಖ್ಯ ಸಚೇತಕ ಇವುಗಳಲ್ಲಿ ಯಾವುದಾದರೂ ಒಂದು ಅಥವಾ ಹೆಚ್ಚು ಸ್ಥಾನಗಳಲ್ಲಿ ಅವನು ಸಲ್ಲಿಸಿದ ಸೇವೆಯ ಅವಧಿಯನ್ನು ಸಹ ಲೆಕ್ಕಕ್ಕೆ ತೆಗೆದುಕೊಳ್ಳತಕ್ಕದ್ದು.]

[4][(5) (1)ನೇ ಉಪ-ಪ್ರಕರಣದ (ಎ) ಮತ್ತು (ಬಿ) ಖಂಡದ ಮೇರೆಗೆ ನಿವೃತ್ತಿ ವೇತನಕ್ಕೆ ಹಕ್ಕುಳ್ಳವನಾದ ಪ್ರತಿಯೊಬ್ಬ ಸದಸ್ಯನಿಗೆ,-

(i) [5][ಅವನಿಗೆ ಮತ್ತು ಅವನ ಜೊತೆಗಾರನಿಗೆ ವರ್ಗಾವಣೆ ಮಾಡಲಾಗದ ಒಂದು ಪಾಸನ್ನು][5] ಒದಗಿಸತಕ್ಕದ್ದು ಮತ್ತು ಅದು, ಅವನು ಯಾವುದೇ ಸಮಯದಲ್ಲಿ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮದ ರಸ್ತೆ ಸಾರಿಗೆ ಸೇವೆಗಳ ಮೂಲಕ, ಕರ್ನಾಟಕದಲ್ಲಿ [5][ಅವನು

1. 1985ರ ಅಧಿನಿಯಮ ಸಂಖ್ಯೆ 24ರ ಮೂಲಕ 26.12.1978 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
2. 2001ರ ಅಧಿನಿಯಮ ಸಂಖ್ಯೆ 14ರ ಮೂಲಕ 1-12-2000 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
3. 1987ರ ಅಧಿನಿಯಮ ಸಂಖ್ಯೆ 16ರ ಮೂಲಕ 1ನೇ ಏಪ್ರಿಲ್ 1987 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.
4. 1991ರ ಅಧಿನಿಯಮ ಸಂಖ್ಯೆ 5ರ ಮೂಲಕ 1ನೇ ನವೆಂಬರ್ 1990 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
5. 1997ರ ಅಧಿನಿಯಮ ಸಂಖ್ಯೆ 19ರ ಮೂಲಕ 1.9.1997 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

ಸಾಮಾನ್ಯವಾಗಿ ವಾಸಿಸುವ ಸ್ಥಳದಿಂದ][5] [1][ಕರ್ನಾಟಕದ ಯಾವುದೇ ಸ್ಥಳಕ್ಕೆ][1] ಅದರಲ್ಲಿ ನಿಯಮಿಸಬಹುದಾದಂಥ ದರ್ಜೆಯಲ್ಲಿ ಹೋಗಿಬರಲು [2][xxx][2] ಹಕ್ಕನ್ನು ನೀಡತಕ್ಕದ್ದು.

(ii) ರಾಜ್ಯ ಸರ್ಕಾರ ನಿರ್ವಹಿಸಿಕೊಂಡು ಬರುವ ಆಸ್ಪತ್ರೆ ಅಥವಾ ಔಷಧಾಲಯಗಳಲ್ಲಿ [3][ಅಥವಾ ಕರ್ನಾಟಕ ವಿಧಾನ ಮಂಡಲವು ಅಧಿಸೂಚಿಸಿದ ಆಸ್ಪತ್ರೆ ಅಥವಾ ಔಷಧಾಲಯಗಳಲ್ಲಿ][3] ನಿಯಮಿಸಬಹುದಾದಂಥ ಸ್ಥಳಾವಕಾಶ ಮತ್ತು ವೈದ್ಯಕೀಯ ಚಿಕಿತ್ಸೆ ಹಾಗೂ ಔಷಧೋಪಚಾರವನ್ನು ಉಚಿತವಾಗಿ ಪಡೆಯಲು ಹಕ್ಕುಳ್ಳವನಾಗಿರತಕ್ಕದ್ದು.][4]

**11ಬಿ. ಕುಟುಂಬ ನಿವೃತ್ತಿ ವೇತನ:-** [4][(1) ಒಬ್ಬ ಸದಸ್ಯ ತನ್ನ ಅಧಿಕಾರದ ಅವಧಿ ಮುಗಿಯುವ ಮೊದಲೇ ಮರಣ ಹೊಂದಿದರೆ ಅವನ ಕುಟುಂಬಕ್ಕೆ ಅಂಥ ಸದಸ್ಯನು ಮರಣಹೊಂದದೇ ಇದ್ದರೆ, ಎಲ್ಲಿಯವರೆಗೆ ಅವನು ಸದಸ್ಯನಾಗಿ ಮುಂದುವರಿಯುತ್ತಿದ್ದನೋ ಆ ಉಳಿದ ಅವಧಿಗೆ ತಿಂಗಳಿಗೆ [5][ಐದು ನೂರು ರೂಪಾಯಿ][5] ದರದಲ್ಲಿ ಕುಟುಂಬ ನಿವೃತ್ತಿ ವೇತನವು ಸಂದಾಯವಾಗತಕ್ಕದ್ದು.][4]

**ವಿವರಣೆ:-** ಈ ಉಪ-ಪ್ರಕರಣದ ಉದ್ದೇಶಕ್ಕಾಗಿ, 'ಕುಟುಂಬ' ಎಂದರೆ ಮೃತ ಸದಸ್ಯನ ಈ ಮುಂದಿನ ಸಂಬಂಧಿಗಳು, ಎಂದರೆ:-

(ಎ) ಹೆಂಡತಿ ಅಥವಾ ಗಂಡ;

(ಬಿ) ಅಪ್ರಾಪ್ತ ವಯಸ್ಕ ಗಂಡು ಮಕ್ಕಳು; ಮತ್ತು

(ಸಿ) ಅವಿವಾಹಿತ ಅಪ್ರಾಪ್ತ ವಯಸ್ಕ ಹೆಣ್ಣು ಮಕ್ಕಳು.

(2) (1)ನೇ ಉಪ- ಪ್ರಕರಣದ ಮೇರೆಗೆ ಅನ್ವಯಿಸುವ ಕುಟುಂಬ ನಿವೃತ್ತಿ ವೇತನವು ಈ ಮುಂದಿನ ಕ್ರಮದಲ್ಲಿ ಸಂದಾಯವಾಗತಕ್ಕದ್ದು:-

(ಎ) ಹೆಂಡತಿ ಅಥವಾ ಗಂಡ; ಮತ್ತು

(ಬಿ) ಸದಸ್ಯನ/ಳ ಗಂಡ :ಹೆಂಡತಿ ಬದುಕಿರದಿದ್ದಾಗ ವಯಸ್ಕ ಗಂಡು ಮಕ್ಕಳಲ್ಲಿ ಅಥವಾ ಅವಿವಾಹಿತ ಅಪ್ರಾಪ್ತ ವಯಸ್ಕ ಹೆಣ್ಣು ಮಕ್ಕಳಲ್ಲಿ ಹಿರಿಯ ವ್ಯಕ್ತಿಗೆ:

ಪರಂತು, ಕುಟುಂಬ ನಿವೃತ್ತಿ ವೇತನ ಪಡೆಯುತ್ತಿರುವ ವ್ಯಕ್ತಿ ಮೃತನಾದರೆ ಅಥವಾ ವಿವಾಹವಾದರೆ ಅಥವಾ ಪ್ರಾಪ್ತ ವಯಸ್ಕನಾದರೆ ಸಂದಾಯ ಮಾಡಬೇಕಾದ ನಿವೃತ್ತಿ ವೇತನವನ್ನು ಆದ್ಯತೆಯ ಕ್ರಮಾಂಕದಲ್ಲಿ ಅವನ ನಂತರ ಕಿರಿಯನಾದ ವ್ಯಕ್ತಿಗೆ ವೇತನವು ಸಂದಾಯವಾಗತಕ್ಕದ್ದು.

**11ಸಿ. ಆತಿಥ್ಯ ಭತ್ಯ:-** (1) ವಿರೋಧಪಕ್ಷದ ನಾಯಕನಿಗೆ ವರ್ಷಕ್ಕೆ [6][ಎಪ್ಪತ್ತೈದು ಸಾವಿರ ರೂಪಾಯಿಗಳ][6] ಆತಿಥ್ಯ ಭತ್ಯ ಸಂದಾಯವಾಗತಕ್ಕದ್ದು.

(2) ಉಪ-ಸಭಾಪತಿ, ಉಪ-ಸಭಾಧ್ಯಕ್ಷ ಮತ್ತು ಸರ್ಕಾರಿ ಮುಖ್ಯ ಸಚೇತಕ - ಇವರಿಗೆ ವರ್ಷಕ್ಕೆ [6][ಐವತ್ತು ಸಾವಿರ ರೂಪಾಯಿಗಳ][6] ಆತಿಥ್ಯ ಭತ್ಯ ಸಂದಾಯವಾಗತಕ್ಕದ್ದು.][9]

**12. ವಿಧಾನ ಸಭಾ ಸದಸ್ಯರು ಮತ್ತು ವಿಧಾನ ಪರಿಷತ್‌ನ ಸದಸ್ಯರು- ಇವರಿಗೆ ಪ್ರಯಾಣ ಭತ್ಯೆ ಮತ್ತು ದಿನಭತ್ಯೆಗಳು ಮತ್ತು ವೈದ್ಯಕೀಯ [7][ಮತ್ತು ಇತರೆ][7] ಸೌಲಭ್ಯಗಳು:-** ಈ ಅಧಿನಿಯಮದ ಮೇರೆಗೆ ರಚಿಸಲಾದ ನಿಯಮಗಳ ಮೂಲಕ ನಿರ್ಧರಿಸಲಾದಂಥ ಷರತ್ತುಗಳಿಗೆ ಒಳಪಟ್ಟು,-

(ಎ) ವಿಧಾನಸಭೆ ಮತ್ತು ವಿಧಾನ ಪರಿಷತ್‌ನ ಸದಸ್ಯರಿಗೆ [8][xxx][8] ಪ್ರವಾಸಗಳಿಗೆ ಸಂಬಂಧಿಸಿದಂತೆ [5][ನಿಯಮಿಸಲಾದಂಥ ಷರತ್ತುಗಳಿಗೆ ಒಳಪಟ್ಟು ಯಾವುದೇ ಬಗೆಯ ಪ್ರಯಾಣವಾಗಿರಲಿ ಅದಕ್ಕೆ ಪ್ರತಿ ಕಿಲೋಮೀಟರಿಗೆ [9][ಎಂಟು ರೂಪಾಯಿಗಳ][9] ದರದಲ್ಲಿ ಪ್ರಯಾಣ ಭತ್ಯವು ಸಂದಾಯವಾಗತಕ್ಕದ್ದು [10][[11][ಮತ್ತು ಎಲ್ಲ ಸದಸ್ಯರಿಗೂ][11] ಅವರ ಹಾಜರಾತಿ ಅವಶ್ಯವಿರುವ ಸ್ಥಳಗಳಲ್ಲಿ ಬಾಡಿಗೆ

1. 1994ರ ಅಧಿನಿಯಮ ಸಂಖ್ಯೆ 5ರ ಮೂಲಕ 1ನೇ ಸೆಪ್ಟೆಂಬರ್ 1993 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
2. 1997ರ ಅಧಿನಿಯಮ ಸಂಖ್ಯೆ 4ರ ಮೂಲಕ 12-12-96 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.
3. 1997ರ ಅಧಿನಿಯಮ ಸಂಖ್ಯೆ 19ರ ಮೂಲಕ 1.9.1997 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
4. 1979ರ ಅಧಿನಿಯಮ ಸಂಖ್ಯೆ 5ರ ಮೂಲಕ 26.12.1978 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
5. 1991ರ ಅಧಿನಿಯಮ ಸಂಖ್ಯೆ 5ರ ಮೂಲಕ 1.11.1990 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
6. 2001ರ ಅಧಿನಿಯಮ ಸಂಖ್ಯೆ 14ರ ಮೂಲಕ 1-12-2000 ದಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
7. 1978ರ ಅಧಿನಿಯಮ ಸಂಖ್ಯೆ 31ರ ಮೂಲಕ 1.4.1978 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
8. 1981ರ ಅಧಿನಿಯಮ ಸಂಖ್ಯೆ 26ರ ಮೂಲಕ 9.4.1981 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.
9. 2004ರ ಅಧಿನಿಯಮ ಸಂಖ್ಯೆ 1ರ ಮೂಲಕ 1.4.2003 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
10. 1957ರ ಅಧಿನಿಯಮ ಸಂಖ್ಯೆ 27ರ ಮೂಲಕ 1.6.1957 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
11. 1974ರ ಅಧಿನಿಯಮ ಸಂಖ್ಯೆ 19ರ ಮೂಲಕ 27.5.1974 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

ಇಲ್ಲದೆ ಪೂರ್ಣವಾಗಿ ಸುಸಜ್ಜಿತಗೊಂಡ ವಸತಿ ವ್ಯವಸ್ಥೆಯನ್ನು ಸಹ ಒದಗಿಸತಕ್ಕದ್ದು.][10] [1][ಮತ್ತು ಅಂಥ ವಸತಿ ವ್ಯವಸ್ಥೆಯನ್ನು [2][ಮಾಡದಿರುವ ಸಂದರ್ಭದಲ್ಲಿ [3][xxx][3]][2] ಸದಸ್ಯನಿಗೆ ಸಭೆಯ ಅವಧಿಯ ಪ್ರತಿ ದಿನಕ್ಕೆ ಮತ್ತು ಸಭೆ ಪ್ರಾರಂಭವಾಗುವ ಮೊದಲಿನ ಎರಡು ದಿನಗಳು ಮತ್ತು ಸಭೆ ಮುಕ್ತಾಯಗೊಂಡ ನಂತರದ ಎರಡು ದಿನಗಳ ಅವಧಿಗೆ [2][ಇಪ್ಪತ್ತೈದು ರೂಪಾಯಿಗಳ][2] ಭತ್ಯವನ್ನು ಸಂದಾಯ ಮಾಡತಕ್ಕದ್ದು.][5]

[4][(ಬಿ) ಎಲ್ಲ ಸದಸ್ಯರಿಗೆ,-

(i) ಅವರು ಸಭೆಗೆ ಹಾಜರಾದುದಕ್ಕಾಗಿ ಮತ್ತು ಸಭೆಯ ನಡುವೆ ಬರುವ ಗೈರುಹಾಜರಿಯ ನಿಯಮಿಸಿದ ಮಧ್ಯಂತರ ರಜಾದಿನಗಳಿಗಾಗಿ ರಾಜ್ಯದ ಒಳಗಡೆ, ಪ್ರತಿ ದಿನಕ್ಕೆ [5][[6][[7][ಐದು ನೂರು ರೂಪಾಯಿಗಳು][7] ಮತ್ತು ಭಾರತದಲ್ಲಿ ಇತರ ಹೊರ ರಾಜ್ಯಗಳಲ್ಲಿ, ಪ್ರತಿ ದಿನಕ್ಕೆ [6][[7][ಆರು ನೂರು ರೂಪಾಯಿಗಳ][7] ದಿನಭತ್ಯ ಸಂದಾಯವಾಗತಕ್ಕದ್ದು.][5]][6]

(ii) ಎಲ್ಲಾ ಸದಸ್ಯರಿಗೆ [8][xxx][8] [9][ಸಭೆ ಪ್ರಾರಂಭವಾಗುವ ಎರಡು ದಿನಗಳ ಮೊದಲು ಮತ್ತು ಸಭೆ ಮುಕ್ತಾಯವಾದ ನಂತರದ ಎರಡು ದಿನಗಳಿಗೆ ದಿನಭತ್ಯವು ಸಂದಾಯವಾಗತಕ್ಕದ್ದು.][9]][4]

[10][[11][(ಸಿ) [2][ಪ್ರತಿಯೊಬ್ಬ ಸದಸ್ಯ ಮತ್ತು ಅವನೊಂದಿಗೆ ವಾಸಿಸುವ ಅಥವಾ ಅವಲಂಬಿತರಾದ ಅವನ ಕುಟುಂಬ ಸದಸ್ಯರು,-][2]

(i) ರಾಜ್ಯ ಸರ್ಕಾರವು ನಿರ್ವಹಿಸಿಕೊಂಡು ಬರುವ ಆಸ್ಪತ್ರೆ ಅಥವಾ ಔಷಧಾಲಯದಲ್ಲಿ [12][ಅಥವಾ ಕರ್ನಾಟಕ ವಿಧಾನ ಮಂಡಲವು ಅಧಿಸೂಚಿಸಿದ ಆಸ್ಪತ್ರೆ ಅಥವಾ ಔಷಧಾಲಯಗಳಲ್ಲಿ][12] ನಿಯಮಿಸಬಹುದಾದಂಥ ಸ್ಥಳಾವಕಾಶ ಹಾಗೂ ನಿಯಮಿಸಬಹುದಾದಂಥ ವೈದ್ಯಕೀಯ ತಪಾಸಣೆ ಮತ್ತು ಚಿಕಿತ್ಸೆಯನ್ನು ಉಚಿತವಾಗಿ ಪಡೆದುಕೊಳ್ಳಲು;

(ii) ರಾಜ್ಯ ಸರ್ಕಾರವು ರಚಿಸಿದ ನಿಯಮಗಳಿಗೆ ಒಳಪಟ್ಟು, ಅವರು ಯಾವುದೇ ಇತರೆ ಸ್ಥಳದಲ್ಲಿ ಪಡೆದುಕೊಂಡ ವೈದ್ಯಕೀಯ ತಪಾಸಣೆ ಮತ್ತು ಚಿಕಿತ್ಸೆಗೆ ಖರ್ಚು ಮಾಡಿದ ವೆಚ್ಚಗಳನ್ನು ವಾಪಸ್ಸುಪಡೆಯಲು

- ಹಕ್ಕುಳ್ಳವರಾಗಿರತಕ್ಕದ್ದು.][11]

[13][(ಸಿಸಿ) ವಿಧಾನ ಸಭೆಯ ಮತ್ತು ವಿಧಾನ ಪರಿಷತ್ತಿನ ಪ್ರತಿಯೊಬ್ಬ ಸದಸ್ಯನು, ಚುನಾವಣಾ ಕ್ಷೇತ್ರ ಪ್ರಯಾಣ ಭತ್ಯೆಯಾಗಿ ವಾರ್ಷಿಕ ಹದಿನೈದು ಸಾವಿರ ರೂಪಾಯಿಗಳ ಮೊಬಲಗನ್ನು ಎರಡು ಸಮಾನ ಕಂತುಗಳಲ್ಲಿ, ಏಪ್ರಿಲ್ ಮತ್ತು ಅಕ್ಟೋಬರ್ ತಿಂಗಳುಗಳಲ್ಲಿ, ನಿಯಮಿಸಬಹುದಾದ ರೀತಿಯಲ್ಲಿ ಸ್ವೀಕರಿಸಲು ಹಕ್ಕುಳ್ಳವನಾಗಿರತಕ್ಕದ್ದು.][13]

[14][(ಸಿಸಿಸಿ) ಸಚಿವ, ರಾಜ್ಯ ಸಚಿವ, ಉಪ-ಸಚಿವ, ಸಭಾಪತಿ, ಸಭಾಧ್ಯಕ್ಷ, ಉಪ-ಸಭಾಪತಿ, ಉಪ-ಸಭಾಧ್ಯಕ್ಷ, ವಿರೋಧ ಪಕ್ಷದ ನಾಯಕ ಮತ್ತು ಸರ್ಕಾರಿ ಮುಖ್ಯ ಸಚೇತಕ- ಇವರೂ ಸೇರಿದಂತೆ ಪ್ರತಿಯೊಬ್ಬ ಸದಸ್ಯನು, ಪ್ರತಿ ಹಣಕಾಸು ವರ್ಷದಲ್ಲಿ, ನಿಯಮಿಸಬಹುದಾದಂಥ ರೀತಿಯಲ್ಲಿ ಮತ್ತು ಅಂಥ ಷರತ್ತುಗಳಿಗೆ ಒಳಪಟ್ಟು ಒಂದು ಅಥವಾ ಹೆಚ್ಚಿನ ಪ್ರಯಾಣಗಳನ್ನು ಒಬ್ಬನೇ ಆಗಲಿ ಅಥವಾ ಜೊತೆಗಾರನೊಂದಿಗೆ ಆಗಲಿ ಭಾರತದಲ್ಲಿ ವಿಮಾನದಲ್ಲಾಗಲಿ ಅಥವಾ ರೈಲ್ವೆಯ ಮೂಲಕ ಯಾವುದೇ ದರ್ಜೆಯಲ್ಲಿ ಪ್ರಯಾಣ ಮಾಡಲು ಪ್ರವಾಸದ ಉದ್ದೇಶಕ್ಕಾಗಿ ಏಪ್ರಿಲ್ ಮತ್ತು ಅಕ್ಟೋಬರ್ ತಿಂಗಳಿನಲ್ಲಿ [7][ಐವತ್ತು ಸಾವಿರ ರೂಪಾಯಿಗಳನ್ನು][7] ಎರಡು ಸಮಾನ ಕಂತುಗಳಲ್ಲಿ ಪಡೆದುಕೊಳ್ಳಲು ಹಕ್ಕುಳ್ಳವನಾಗಿರತಕ್ಕದ್ದು. ಅಂಥ ಪ್ರಯಾಣಗಳನ್ನು ಮಾಡಿದಾಗ ಸದಸ್ಯರು ಪ್ರಯಾಣ ಅಥವಾ ದಿನಭತ್ಯೆ ಪಡೆಯಲು ಹಕ್ಕುಳ್ಳವರಾಗಿರತಕ್ಕದ್ದಲ್ಲ.][14]

[4][(ಡಿ) (ಎ) ಖಂಡದ ಮೇರೆಗೆ ಪ್ರಯಾಣ ಭತ್ಯಕ್ಕೆ ಹಕ್ಕುಳ್ಳವರಾದ ಸದಸ್ಯರು, ಬೆಂಗಳೂರು ನಗರದಲ್ಲಿ ಸಭೆಗಳ ಸಂಬಂಧದಲ್ಲಿ ಅವರ ಹಾಜರಾತಿಯು ಅಗತ್ಯವಿರುವ ದಿನಗಳಲ್ಲದೆ ಇತರ ದಿನಗಳಲ್ಲಿ ಅವರು ತಂಗಬೇಕಾದಾಗ, [13][ಮಂಡಲಿಯು, ಕಾಲಕಾಲಕ್ಕೆ ಗೊತ್ತುಪಡಿಸಬಹುದಾದಂಥ ಬಾಡಿಗೆ][13] ಯನ್ನು ಸಂದಾಯ ಮಾಡಿದ ಮೇಲೆ ಪೂರ್ಣವಾಗಿ ಸುಸಜ್ಜಿತವಾದ ಸ್ಥಳಾವಕಾಶವನ್ನು ಅವರಿಗೆ ಒದಗಿಸತಕ್ಕದ್ದು.][4]

1. 1976ರ ಅಧಿನಿಯಮ ಸಂಖ್ಯೆ 72ರ ಮೂಲಕ 19.7.1976 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
2. 1978ರ ಅಧಿನಿಯಮ ಸಂಖ್ಯೆ 31ರ ಮೂಲಕ 1.4.1978 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
3. 1984ರ ಅಧಿನಿಯಮ ಸಂಖ್ಯೆ 22ರ ಮೂಲಕ 26.4.1984 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.
4. 1957ರ ಅಧಿನಿಯಮ ಸಂಖ್ಯೆ 27ರ ಮೂಲಕ 1.6.1957 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
5. 1991ರ ಅಧಿನಿಯಮ ಸಂಖ್ಯೆ 5ರ ಮೂಲಕ 1.11.1990 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
6. 1997ರ ಅಧಿನಿಯಮ ಸಂಖ್ಯೆ 19ರ ಮೂಲಕ 1.9.1997 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
7. 2001ರ ಅಧಿನಿಯಮ ಸಂಖ್ಯೆ 14ರ ಮೂಲಕ 1.12.2000 ದಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
8. 1981ರ ಅಧಿನಿಯಮ ಸಂಖ್ಯೆ 26ರ ಮೂಲಕ 9.4.1981 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.
9. 1974ರ ಅಧಿನಿಯಮ ಸಂಖ್ಯೆ 19ರ ಮೂಲಕ 27.5.1974 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
10. 1967ರ ಅಧಿನಿಯಮ ಸಂಖ್ಯೆ 8ರ ಮೂಲಕ 10.8.1967 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
11. 1976ರ ಅಧಿನಿಯಮ ಸಂಖ್ಯೆ 72ರ ಮೂಲಕ 19.7.1976 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
12. 1997ರ ಅಧಿನಿಯಮ ಸಂಖ್ಯೆ 19ರ ಮೂಲಕ 1.9.1997 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
13. 2004ರ ಅಧಿನಿಯಮ ಸಂಖ್ಯೆ 1ರ ಮೂಲಕ 1.4.2003 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
14. 1992ರ ಅಧಿನಿಯಮ ಸಂಖ್ಯೆ 16ರ ಮೂಲಕ 1.11.1990 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][(ಡಿಡಿ) ಸದಸ್ಯರು ನವದೆಹಲಿಯಲ್ಲಿ ತಂಗಬೇಕಾದ ದಿನಗಳಲ್ಲಿ, ರಾಜ್ಯ ಸರ್ಕಾರವು ಕಾಲಕಾಲಕ್ಕೆ ಆದೇಶದ ಮೂಲಕ ನಿರ್ದಿಷ್ಟಪಡಿಸಬಹುದಾದಂಥ ದರಗಳಲ್ಲಿ ಬಾಡಿಗೆಯನ್ನು ಸಂದಾಯಮಾಡಿದ ಮೇಲೆ [2][ಕರ್ನಾಟಕ ಭವನ][2]ದಲ್ಲಿ ಸ್ಥಳಾವಕಾಶವನ್ನು ಒದಗಿಸಬಹುದು.][1]

[3][(ಇ) ಸಮಿತಿಯು ಕೈಗೊಂಡ ಪ್ರಯಾಣಗಳ ಸಂಬಂಧದಲ್ಲಿ ಸಮಿತಿಯ ಸದಸ್ಯರಿಗೆ,-

(i) ಸಮಿತಿಯು ಕೇವಲ ವಿಧಾನ ಪರಿಷತ್ತಿನ ಸದಸ್ಯರ ಸಮಿತಿಯಾಗಿದ್ದಾಗ, ಸಭಾಪತಿಯ ಅನುಮೋದನೆಯೊಂದಿಗೆ;

(ii) ಸಮಿತಿಯು ಕೇವಲ ವಿಧಾನ ಸಭಾ ಸದಸ್ಯರುಗಳ ಸಮಿತಿಯಾಗಿದ್ದಾಗ, ಸಭಾಧ್ಯಕ್ಷರ ಅನುಮೋದನೆಯೊಂದಿಗೆ; ಮತ್ತು

(iii) ಸಮಿತಿಯು ವಿಧಾನ ಮಂಡಲದ ಸದನಗಳ ಸದಸ್ಯರ ಸಮಿತಿಯಾಗಿದ್ದಾಗ, ಸಭಾಪತಿ ಮತ್ತು ಸಭಾಧ್ಯಕ್ಷರ ಅನುಮೋದನೆಯೊಂದಿಗೆ;

ಭಾರತದಲ್ಲಿ ರಾಜ್ಯದ ಒಳಗಡೆಯಾಗಲಿ ಅಥವಾ ರಾಜ್ಯದ ಹೊರಗಡೆಯಾಗಲಿ ರೈಲಿನ ಮೂಲಕ ಮಾಡಲಾದ ಪ್ರಯಾಣಗಳಿಗೆ ಮತ್ತು ರಸ್ತೆ ಮೂಲಕ ಮಾಡಿದ ಪ್ರಯಾಣಗಳಿಗೆ, (ಎ) ಖಂಡದಲ್ಲಿ ನಿರ್ದಿಷ್ಟಪಡಿಸಿದ ದರಗಳಲ್ಲಿ ಮತ್ತು ರಾಜ್ಯದ ಹೊರಗಡೆ ಭಾರತದಲ್ಲಿ ವಿಮಾನದ ಮೂಲಕ ಮಾಡಲಾದ ಪ್ರಯಾಣಗಳಿಗೆ, ಅಂಥ ಪ್ರಯಾಣಗಳಿಗೆ ಸಂದಾಯಮಾಡಿದ ವಿಮಾನಯಾನ ದರದ ಒಂದು ಐದನೇ ಒಂದು ಭಾಗದಷ್ಟು ಪ್ರಯಾಣ ಭತ್ಯವನ್ನು ಮತ್ತು ವಿಮಾನದ ಮೂಲಕ ಪ್ರಯಾಣ ಮಾಡುವಾಗ ಉಂಟಾಗುವ ಅಪಘಾತಗಳ ಸಂಬಂಧದಲ್ಲಿ ವಿಮೆಗಾಗಿ ನಿಯಮಿಸಬಹುದಾದಂಥ ವಿಮಾಕಂತು ಮತ್ತು ರಾಜ್ಯದ ಒಳಗೆ ಯಾವುದೇ ಸ್ಥಳದಲ್ಲಿ ತಂಗುವ ದಿನಗಳಿಗೆ ಪ್ರತಿ ದಿವಸಕ್ಕೆ ಹದಿನೈದು ರೂಪಾಯಿಗಳು ಮತ್ತು ರಾಜ್ಯದ ಹೊರಗಡೆ ಯಾವುದೇ ಸ್ಥಳದಲ್ಲಿ ತಂಗುವ ಪ್ರತಿ ದಿವಸಕ್ಕೆ ಇಪ್ಪತ್ತೈದು ರೂಪಾಯಿಗಳ ದಿನಭತ್ಯವು ಸಂದಾಯವಾಗತಕ್ಕದ್ದು:

ಪರಂತು, ಈ ಖಂಡದ ಮೇರೆಗೆ ಸಂದಾಯಮಾಡುವ ವಿಮಾನ ಪ್ರಯಾಣದ ಒಂದು ದರದ ಐದನೇ ಒಂದು ಭಾಗವು ಮೂವತ್ತು ರೂಪಾಯಿಗಳನ್ನು ಮೀರಿದ್ದಾಗ, ಹಾಗೆ ಸಂದಾಯವಾಗಬೇಕಾದ ಮೊಬಲಗನ್ನು ಮೂವತ್ತು ರೂಪಾಯಿಗೆ ಮಿತಿಗೊಳಿಸತಕ್ಕದ್ದು.][3]

[4][(ಎಫ್) ವಿಧಾನ ಸಭೆಯ ಅಥವಾ ವಿಧಾನ ಪರಿಷತ್ತಿನ ಅಥವಾ ಅವೆರಡರ ಸದನ ಸಮಿತಿಯ ಅಧ್ಯಕ್ಷನಾಗಿರುವ ಸದನದ ಸದಸ್ಯನು ಸಮಿತಿಯ ಅಧ್ಯಕ್ಷನಾಗಿ ತನ್ನ ಕರ್ತವ್ಯಗಳನ್ನು ನಿರ್ವಹಿಸುವ ಸಂಬಂಧದಲ್ಲಿ ಭಾರತದಲ್ಲಿ ರಾಜ್ಯದ ಹೊರಗೆ ಪ್ರಯಾಣಮಾಡುವ ಸಂದರ್ಭದಲ್ಲಿ,-

(i) ಅಂಥ ಸದಸ್ಯನು ರೈಲಿನ ಮೂಲಕ ಅಥವಾ ರಸ್ತೆಯ ಮೂಲಕ ಪ್ರಯಾಣಿಸಿದರೆ, (ಎ) ಖಂಡದಲ್ಲಿ ನಿರ್ದಿಷ್ಟಪಡಿಸಿದ ದರಗಳಲ್ಲಿ ಹಾಗೂ ವಿಮಾನ ಮೂಲಕ ಪ್ರಯಾಣಿಸಿದರೆ, ವಿಮಾನಯಾನದ ಒಂದು ಕಡೆಯ ಪ್ರಯಾಣ ದರದ ಒಂದು ಐದನೇ ಒಂದರಷ್ಟು ದರದಲ್ಲಿ ಪ್ರಯಾಣ ಭತ್ಯೆಯನ್ನು ಅವರಿಗೆ ಸಂದಾಯ ಮಾಡತಕ್ಕದ್ದು:

ಪರಂತು, ಸಂದಾಯವಾಗಬೇಕಾದ ವಿಮಾನಯಾನದ ದರದ ಐದನೇ ಒಂದು ಭಾಗವು ಮೂವತ್ತು ರೂಪಾಯಿಗಳನ್ನು ಮೀರಿದ್ದರೆ ಹಾಗೆ ಸಂದಾಯವಾಗಬೇಕಾದ ಮೊಬಲಗನ್ನು ಮೂವತ್ತು ರೂಪಾಯಿಗಳಿಗೆ ಮಿತಿಗೊಳಿಸತಕ್ಕದ್ದು;

(ii) ವಿಮಾನದ ಮೂಲಕ ಪ್ರಯಾಣ ಮಾಡುವಾಗ ಉಂಟಾಗಬಹುದಾದ ಅಪಘಾತಗಳ ಸಂಬಂಧದಲ್ಲಿ ವಿಮೆಗಾಗಿ ನಿಯಮಿಸಬಹುದಾದಂಥ ವಿಮಾ ಕಂತು;

(iii) ಪ್ರತಿ ದಿನಕ್ಕೆ ಇಪ್ಪತ್ತೈದು ರೂಪಾಯಿಗಳ ದಿನಭತ್ಯ; ಮತ್ತು

(iv) ಅಂಥ ಸಮಿತಿಗಳ ಅಧ್ಯಕ್ಷರ ಸಮ್ಮೇಳನದಲ್ಲಿ ಭಾಗವಹಿಸಲು ಅವರು ಉಳಿದುಕೊಂಡಿದ್ದ ಸ್ಥಳದಲ್ಲಿ ಸಾರಿಗೆ ಸೌಲಭ್ಯಕ್ಕಾಗಿ ನಿಯಮಿಸಬಹುದಾದಂಥ ವೆಚ್ಚಗಳು;][4]

[5][(ಜಿ) [6][ಸಚಿವ, ರಾಜ್ಯ ಸಚಿವ, ಉಪ-ಸಚಿವ, ಸಭಾಪತಿ, ಸಭಾಧ್ಯಕ್ಷ, ಉಪ-ಸಭಾಪತಿ, ಉಪ-ಸಭಾಧ್ಯಕ್ಷ, ವಿರೋಧ ಪಕ್ಷದ ನಾಯಕ ಮತ್ತು ಸರ್ಕಾರಿ ಮುಖ್ಯ ಸಚೇತಕ - ಇವರೂ ಸೇರಿದಂತೆ ಸದಸ್ಯರು [7][ತಾವು ಆಯ್ಕೆಮಾಡಿದ ಸ್ಥಳದಲ್ಲಿ ಸರ್ಕಾರದ ವೆಚ್ಚದಲ್ಲಿ][7] ದೂರವಾಣಿ ಹಾಕಿಸಿಕೊಳ್ಳಲು ಹಕ್ಕುಳ್ಳವರಾಗಿರತಕ್ಕದ್ದು.][6]

ಮೂಲ ಠೇವಣಿ, ಸ್ಥಾಪನೆ ಮತ್ತು ಬಾಡಿಗೆ ವೆಚ್ಚಗಳ ಸಂಬಂಧದಲ್ಲಿನ ವೆಚ್ಚವನ್ನು ರಾಜ್ಯ ಸರ್ಕಾರವು ಭರಿಸತಕ್ಕದ್ದು. ಒಬ್ಬ ಸದಸ್ಯನು ತನ್ನ ಸ್ವಂತ ವೆಚ್ಚದಲ್ಲಿ ದೂರವಾಣಿ ಹಾಕಿಸಿಕೊಂಡಿರುವಾಗ [7][ಅಂಥ ಸ್ಥಳದಲ್ಲಿ][7] ಅದಕ್ಕೆ ಸಂಬಂಧಿಸಿದ ಬಾಡಿಗೆ ವೆಚ್ಚಗಳನ್ನೂ ರಾಜ್ಯ ಸರ್ಕಾರವು ಭರಿಸತಕ್ಕದ್ದು.

1. 1968ರ ಅಧಿನಿಯಮ ಸಂಖ್ಯೆ 18ರ ಮೂಲಕ 24.10.1968 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
2. 1973ರ ಕರ್ನಾಟಕ ಕಾನೂನು ಅಳವಡಿಕೆಗಳ ಆದೇಶದ ಮೂಲಕ 1.11.1973 ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.
3. 1976ರ ಅಧಿನಿಯಮ ಸಂಖ್ಯೆ 72ರ ಮೂಲಕ 19.7.1976 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
4. 1976ರ ಅದಿನಿಯಮ ಸಂಖ್ಯೆ 13ರ ಮೂಲಕ 1.3.1975 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
5. 1978ರ ಅಧಿನಿಯಮ ಸಂಖ್ಯೆ 31ರ ಮೂಲಕ 1.4.1978 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
6. 1979ರ ಅಧಿನಿಯಮ ಸಂಖ್ಯೆ 5ರ ಮೂಲಕ 27.12.1978 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
7. 1979ರ ಅಧಿನಿಯಮ ಸಂಖ್ಯೆ 31ರ ಮೂಲಕ 17.10.1979 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][(ಹೆಚ್) ಪ್ರತಿಯೊಬ್ಬ ಸದಸ್ಯನಿಗೂ ಈ ಮುಂದಿನ ಭತ್ಯಗಳು ಸಂದಾಯ ವಾಗತಕ್ಕದ್ದು-

(i) ದೂರವಾಣಿ ಕರೆಗಳಿಗಾಗಿ ಅವನು ಭರಿಸಿದ ವೆಚ್ಚಗಳಿಗಾಗಿ ತಿಂಗಳಿಗೆ [2][ಆರು ಸಾವಿರದ ಐದುನೂರು][2] ರೂಪಾಯಿ;

(ii) ಸಂಚಿತ ಭತ್ಯಗಳಾಗಿ [3][ಮೂರು ಸಾವಿರದ ಐದುನೂರು][3] ರೂಪಾಯಿ.

(iii) ಅಂಚೆ ವೆಚ್ಚಗಳ ಸಂಬಂಧ [3][ಒಂದು ಸಾವಿರ][3] ರೂಪಾಯಿ;

(iv) ಸದಸ್ಯನು, ಸದಸ್ಯನಾಗಿ ತನ್ನ ಕರ್ತವ್ಯಗಳನ್ನು ನಿರ್ವಹಿಸಲು [4][ಆಪ್ತ ಸಹಾಯಕನಿಗೆ ಮತ್ತು ರೂಂಬಾಯ್‌ಗಳ ಸಂಬಳ ಎಂದು ಎರಡು ಸಾವಿರ ರೂಪಾಯಿ.][4]][1]

ವಿವರಣೆ:- ಈ ಪ್ರಕರಣದ ಉದ್ದೇಶಕ್ಕಾಗಿ, 'ಸಭೆ' ಎಂದರೆ ವಿಧಾನ ಸಭೆ ಅಥವಾ ವಿಧಾನ ಪರಿಷತ್‌ನ ಸಭೆ ಅಥವಾ ಸದರಿ ವಿಧಾನ ಸಭೆ ಅಥವಾ ಪರಿಷತ್ ಅಥವಾ ಅವೆರಡರ ಯಾವುದೇ ಸಮಿತಿಯ ಸಭೆ.

[5][**12ಎ.** xxxx][5]

**13. ಸಚಿವ [6][ರಾಜ್ಯ ಸಚಿವ][6] ಉಪ-ಸಚಿವ, ಸಭಾಪತಿ, ಸಭಾಧ್ಯಕ್ಷ, ಉಪ-ಸಭಾಪತಿ, [7][ಸಭಾಧ್ಯಕ್ಷ, ಉಪ-ಸಭಾಧ್ಯಕ್ಷ, ವಿರೋಧ ಪಕ್ಷದ ನಾಯಕರು ಮತ್ತು ಸರ್ಕಾರಿ ಮುಖ್ಯ ಸಚೇತಕ][7] ಇವರು ಸದಸ್ಯರಾಗಿ ಸಂಬಳ ಪಡೆಯದಿರುವುದು:-** (1) ಸಚಿವ, [6][ರಾಜ್ಯ ಸಚಿವ][6], ಉಪಸಚಿವ, [8][ಸಭಾಪತಿ, ಉಪ-ಸಭಾಪತಿ, ಸಭಾಧ್ಯಕ್ಷ, ಉಪ-ಸಭಾಧ್ಯಕ್ಷ][8], [9][ಅಥವಾ ವಿರೋಧ ಪಕ್ಷದ ನಾಯಕರು ಮತ್ತು ಸರ್ಕಾರಿ ಮುಖ್ಯ ಸಚೇತಕರು][9] ತಮ್ಮ ಅಧಿಕಾರ ಸ್ಥಾನದ ಸಂಬಳ ಮತ್ತು ಭತ್ಯಗಳನ್ನು ಪಡೆಯುತ್ತಿರುವಾಗ ಸಂದರ್ಭಾನುಸಾರ ವಿಧಾನಸಭೆ ಅಥವಾ ವಿಧಾನ ಪರಿಷತ್ತಿನ ಸದಸ್ಯನಾಗಿ ಯಾವುದೇ ಸಂಬಳ ಅಥವಾ ಭತ್ಯವನ್ನು ಪಡೆಯಲು ಹಕ್ಕುಳ್ಳವರಾಗಿರತಕ್ಕದ್ದಲ್ಲ:

[10][ಪರಂತು, 10ಬಿ ಪ್ರಕರಣದ ಮೇರೆಗೆ ಒದಗಿಸಲಾದ ಸೌಲಭ್ಯವನ್ನು ಪಡೆದುಕೊಳ್ಳದ ಉಪ-ಸಭಾಪತಿ ಅಥವಾ ಉಪ-ಸಭಾಧ್ಯಕ್ಷನು 12ನೇ ಪ್ರಕರಣದ (ಎ) ಮತ್ತು (ಬಿ) ಖಂಡಗಳಲ್ಲಿ ನಿರ್ದಿಷ್ಟಪಡಿಸಿದ ಭತ್ಯಗಳನ್ನು ಸಂದರ್ಭಾನುಸಾರ, ವಿಧಾನಸಭೆ ಅಥವಾ ವಿಧಾನ ಪರಿಷತ್ತಿನ ಸದಸ್ಯನಾಗಿ ಪಡೆದುಕೊಳ್ಳಲು ಹಕ್ಕುಳ್ಳವನಾಗಿರತಕ್ಕದ್ದು:

ಮತ್ತೂ ಪರಂತು, ಅವನು ಸಂದರ್ಭಾನುಸಾರ 8ನೇ ಪ್ರಕರಣದ ಮೇರೆಗೆ ಅಥವಾ 12ನೇ ಪ್ರಕರಣದ (ಎಫ್) ಖಂಡದ ಮೇರೆಗೆ ಅನ್ವಯಿಸುವ ಭತ್ಯಗಳಿಗೆ ಸಹ ಹಕ್ಕುಳ್ಳವರಾಗಿರತಕ್ಕದ್ದು.][10]

[9][(1ಎ) (1)ನೇ ಉಪ-ಪ್ರಕರಣದಲ್ಲಿ ಏನೇ ಇದ್ದರೂ, ಸಂದರ್ಭಾನುಸಾರ 10ಎಫ್ ಪ್ರಕರಣದಲ್ಲಿ ಅಥವಾ 10ನೇ ಪ್ರಕರಣದಲ್ಲಿ ಒದಗಿಸಲಾದ ಸೌಲಭ್ಯವನ್ನು ಪಡೆದುಕೊಳ್ಳದಿರುವ ವಿರೋಧ ಪಕ್ಷದ ನಾಯಕ ಅಥವಾ ಸರ್ಕಾರಿ ಮುಖ್ಯ ಸಚೇತಕನು ವಿಧಾನ ಸಭೆ ಅಥವಾ ವಿಧಾನ ಪರಿಷತ್ತಿನ ಸದಸ್ಯನಾಗಿ ಅಥವಾ ವಿಧಾನ ಸಭೆ ಅಥವಾ ವಿಧಾನ ಪರಿಷತ್ತು ಅಥವಾ ಅವೆರಡರ ಯಾವುದೇ ಸಮಿತಿಯ ಅಧ್ಯಕ್ಷರಾಗಿ 12ನೇ ಪ್ರಕರಣದ (ಎ), (ಬಿ), (ಸಿ) ಮತ್ತು (ಎಫ್) ಖಂಡಗಳಲ್ಲಿ ನಿರ್ದಿಷ್ಟಪಡಿಸಲಾದ ಭತ್ಯಗಳಿಗೆ ಹಕ್ಕುಳ್ಳವರಾಗಿರತಕ್ಕದ್ದು.][9]

(2) [8][ಸಭಾಪತಿ, ಉಪ-ಸಭಾಪತಿ, [7][ಸಭಾಧ್ಯಕ್ಷ, ಉಪ-ಸಭಾಧ್ಯಕ್ಷ,][8] ವಿರೋಧ ಪಕ್ಷದ ನಾಯಕ ಅಥವಾ ಸರ್ಕಾರಿ ಮುಖ್ಯ ಸಚೇತಕ][7] ಇವರು ತಮ್ಮ ಅಧಿಕಾರದ ಅವಧಿಯಲ್ಲಿ, ಸಂದರ್ಭಾನುಸಾರ [8][ಸಭಾಪತಿ, ಉಪ-ಸಭಾಪತಿ, [7][ಸಭಾಧ್ಯಕ್ಷ, ಉಪ-ಸಭಾಧ್ಯಕ್ಷ,][8] ವಿರೋಧ ಪಕ್ಷದ ನಾಯಕ ಅಥವಾ ಸರ್ಕಾರಿ ಮುಖ್ಯ ಸಚೇತಕನಾಗಿ][7] ತನ್ನ ಕರ್ತವ್ಯದ ಹೊರತಾದ ಯಾವುದೇ ವೃತ್ತಿ ನಡೆಸತಕ್ಕದ್ದಲ್ಲ ಅಥವಾ ಯಾವುದೇ ವ್ಯಾಪಾರದಲ್ಲಿ ನಿರತನಾಗತಕ್ಕದ್ದಲ್ಲ ಅಥವಾ ಪರಿಶ್ರಮಧನ ಪಡೆಯಲು ಇತರ ಯಾವುದೇ ಉದ್ಯೋಗವನ್ನು ಮಾಡತಕ್ಕದ್ದಲ್ಲ.

[11][(3) xxx][11]

1. 1991ರ ಅಧಿನಿಯಮ ಸಂಖ್ಯೆ 5ರ ಮೂಲಕ 1.11.1990 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
2. 2004ರ ಅಧಿನಿಯಮ ಸಂಖ್ಯೆ 1ರ ಮೂಲಕ 1.4.2003 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
3. 2001ರ ಅಧಿನಿಯಮ ಸಂಖ್ಯೆ 14ರ ಮೂಲಕ 1.12.2000 ದಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
4. 1994ರ ಅಧಿನಿಯಮ ಸಂಖ್ಯೆ 5ರ ಮೂಲಕ 1.9.1993 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
5. 1978ರ ಅಧಿನಿಯಮ ಸಂಖ್ಯೆ 31ರ ಮೂಲಕ 1.4.1978 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.
6. 1978ರ ಅಧಿನಿಯಮ ಸಂಖ್ಯೆ 31ರ ಮೂಲಕ 26.12.1978 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
7. 1976ರ ಅಧಿನಿಯಮ ಸಂಖ್ಯೆ 72ರ ಮೂಲಕ 19.7.1976 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
8. 1975ರ ಅಧಿನಿಯಮ ಸಂಖ್ಯೆ 3ರ ಮೂಲಕ 14.10.1974 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
9. 1976ರ ಅಧಿನಿಯಮ ಸಂಖ್ಯೆ 72ರ ಮೂಲಕ 19.7.1976 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
10. 1976ರ ಅಧಿನಿಯಮ ಸಂಖ್ಯೆ 72ರ ಮೂಲಕ 14.10.1974 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
11. 1975ರ ಅಧಿನಿಯಮ ಸಂಖ್ಯೆ 3ರ ಮೂಲಕ 14.10.1974 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

[1][**13ಎ. ಮೋಟಾರು ಕಾರುಗಳು ಮತ್ತು ಮೋಟಾರು ಸೈಕಲ್‌ಗಳ ಖರೀದಿಗಾಗಿ ಮುಂಗಡಗಳ ಮಂಜೂರಾತಿ:–** ನಿಯಮಿಸಬಹುದಾದಂಥ ಷರತ್ತುಗಳಿಗೆ ಒಳಪಟ್ಟು, ಪ್ರತಿಯೊಬ್ಬ ಸದಸ್ಯನು ಮೋಟಾರು ಕಾರು ಅಥವಾ ಮೋಟಾರು ಸೈಕಲ್ ಖರೀದಿಗಾಗಿ ಮುಂಗಡ ಮಂಜೂರಾತಿಗೆ ಹಕ್ಕುಳ್ಳವರಾಗಿರತಕ್ಕದ್ದು.

**13ಬಿ. ಬಾಕಿಗಳ ವಸೂಲಿ:–** ವಿಧಾನ ಮಂಡಲದ ಸದಸ್ಯನಾಗಿರುವ ಅಥವಾ ಸದಸ್ಯನಾಗಿದ್ದ ವ್ಯಕ್ತಿಯಿಂದ ಸರ್ಕಾರ ಅಥವಾ ವಿಧಾನ ಮಂಡಲದ ಸಚಿವಾಲಯಕ್ಕೆ ಬಾಕಿ ಇರುವ ಯಾವುದೇ ಮೊತ್ತದ ವಸೂಲಿಯ ಯಾವುದೇ ಇತರೆ ವಿಧಾನಕ್ಕೆ ಬಾಧಕವಿಲ್ಲದಂತೆ,-

(ಎ) 11ನೇ ಪ್ರಕರಣದ ಮೇರೆಗೆ ಸಂದಾಯವಾಗತಕ್ಕ ಆತನ ಸಂಬಳದಿಂದ;

(ಬಿ) 11ಎ ಪ್ರಕರಣದ ಮೇರೆಗೆ ಸಂದಾಯವಾಗತಕ್ಕ ಆತನ ನಿವೃತ್ತಿ ವೇತನದಿಂದ;

(ಸಿ) ಅದು ಭೂಕಂದಾಯದ ಬಾಕಿ ಆಗಿದ್ದರೆ ಹೇಗೋ ಹಾಗೆ

- ವಸೂಲಿ ಮಾಡಬಹುದು.

**ವಿವರಣೆ:–** ಈ ಪ್ರಕರಣದ ಉದ್ದೇಶಕ್ಕಾಗಿ ವಿಧಾನ ಮಂಡಲದ ಸದಸ್ಯ ಎಂಬ ಪದವು ಸಚಿವ, ರಾಜ್ಯ ಸಚಿವ, ಉಪ-ಸಚಿವ, ಸಭಾಪತಿ, ಸಭಾಧ್ಯಕ್ಷ, ಉಪ-ಸಭಾಧ್ಯಕ್ಷ, ವಿರೋಧ ಪಕ್ಷದ ನಾಯಕ ಮತ್ತು ಸರ್ಕಾರಿ ಮುಖ್ಯ ಸಚೇತಕ- ಇವರುಗಳನ್ನು ಒಳಗೊಳ್ಳುತ್ತದೆ.][1]

[2][**13ಸಿ. ಕ್ಷೇಮಾಭಿವೃದ್ಧಿ ನಿಧಿಯ ಸ್ಥಾಪನೆ:–** (1) ಕರ್ನಾಟಕ ಶಾಸಕರ ಕ್ಷೇಮಾಭಿವೃದ್ಧಿ ನಿಧಿ (ಇದರಲ್ಲಿ ಇನ್ನು ಮುಂದೆ ನಿಧಿ ಎಂದು ಉಲ್ಲೇಖಿಸಲಾಗಿದೆ) ಎಂದು ಕರೆಯಲಾಗುವ ಒಂದು ನಿಧಿಯು ಸ್ಥಾಪಿತವಾಗತಕ್ಕದ್ದು.

(2) (1)ನೇ ಉಪ-ಪ್ರಕರಣದಲ್ಲಿ ನಿರ್ದಿಷ್ಟಪಡಿಸಲಾದ ನಿಧಿಯು,-

(ಎ) ಕರ್ನಾಟಕ ವಿಧಾನ ಸಭೆ ಅಥವಾ ವಿಧಾನ ಪರಿಷತ್ತಿನ ಯಾರೇ ಸದಸ್ಯ ಅಥವಾ ಮಾಜಿ ಸದಸ್ಯರು ನೀಡಬಹುದಾದಂಥ ಮೊಬಲಗು;

(ಬಿ) ಸರ್ಕಾರ ಅಥವಾ ಯಾರೇ ಇತರ ವ್ಯಕ್ತಿಗಳಿಂದ ನಿಧಿಗೆ ಕಾಣಿಕೆ ಅಥವಾ ದಾನ ಅಥವಾ ದೇಣಿಗೆಯಾಗಿ ನೀಡಬಹುದಾದಂಥ ಮೊಬಲಗು;

(ಸಿ) ಸದರಿ ನಿಧಿಯಲ್ಲಿನ ಮೊಬಲಗಿನ ಮೇಲೆ ಗಳಿಸಲಾದ ಬಡ್ಡಿ

- ಇವುಗಳನ್ನು ಒಳಗೊಂಡಿರತಕ್ಕದ್ದು.

(3) ನಿಧಿಯನ್ನು ಕರ್ನಾಟಕ ಶಾಸಕರ ಕ್ಷೇಮಾಭಿವೃದ್ಧಿ ನಿಧಿ ಪ್ರಾಧಿಕಾರ ಎಂದು ಕರೆಯಲಾಗುವ ಪ್ರಾಧಿಕಾರವು ನಿಯಮಿಸಬಹುದಾದಂಥ ನಿಯಮಗಳಿಗೆ ಅನುಸಾರವಾಗಿ ಪ್ರವರ್ತಿಸತಕ್ಕದ್ದು ಅಥವಾ ಆಡಳಿತ ನಡೆಸತಕ್ಕದ್ದು ಅಥವಾ ನಿರ್ವಹಿಸತಕ್ಕದ್ದು.

[3][(4) ಕರ್ನಾಟಕ ವಿಧಾನ ಸಭೆಯ ಕ್ಷೇಮಾಭಿವೃದ್ಧಿ ನಿಧಿ ಪ್ರಾಧಿಕಾರವು ಈ ಮುಂದಿನವರನ್ನು ಒಳಗೊಂಡಿರತಕ್ಕದ್ದು, ಎಂದರೆ,-

| | | |
|---|---|---|
| (ಎ) | ಸಭಾಧ್ಯಕ್ಷ, ಕರ್ನಾಟಕ ವಿಧಾನಸಭೆ | ಅಧ್ಯಕ್ಷರು |
| (ಬಿ) | ಸಂಸದೀಯ ವ್ಯವಹಾರಗಳ ಪ್ರಭಾರದಲ್ಲಿರುವ ಸಚಿವರು ಕರ್ನಾಟಕ ಸರ್ಕಾರ | ಸದಸ್ಯರು |
| (ಸಿ) | ವಿಧಾನ ಸಭೆಯ ವಿರೋಧ ಪಕ್ಷದ ನಾಯಕ | ಸದಸ್ಯರು |
| (ಡಿ) | ಕರ್ನಾಟಕ ವಿಧಾನ ಸಭೆಯ ಕಾರ್ಯದರ್ಶಿಯು, ಪ್ರಾಧಿಕಾರದ ಕಾರ್ಯದರ್ಶಿಯಾಗಿರತಕ್ಕದ್ದು. | |

(4ಎ) ಕರ್ನಾಟಕ ವಿಧಾನ ಪರಿಷತ್ತಿನ ಕ್ಷೇಮಾಭಿವೃದ್ಧಿ ನಿಧಿ ಪ್ರಾಧಿಕಾರವು ಈ ಮುಂದಿನವರನ್ನು ಒಳಗೊಂಡಿರತಕ್ಕದ್ದು, ಎಂದರೆ,-

| | | |
|---|---|---|
| (ಎ) | ಸಭಾಪತಿ, ಕರ್ನಾಟಕ ವಿಧಾನ ಪರಿಷತ್ತು | ಅಧ್ಯಕ್ಷರು |
| (ಬಿ) | ಸಂಸದೀಯ ವ್ಯವಹಾರಗಳ ಪ್ರಭಾರದಲ್ಲಿರುವ ಸಚಿವರು, ಕರ್ನಾಟಕ ಸರ್ಕಾರ | ಸದಸ್ಯರು |
| (ಸಿ) | ವಿಧಾನ ಪರಿಷತ್ತಿನ ವಿರೋಧ ಪಕ್ಷದ ನಾಯಕ | ಸದಸ್ಯರು |

1. 1985ರ ಅಧಿನಿಯಮ ಸಂಖ್ಯೆ 38ರ ಮೂಲಕ 1.4.1985 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
2. 1992ರ ಅಧಿನಿಯಮ ಸಂಖ್ಯೆ 16ರ ಮೂಲಕ 8.5.1992 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
3. 1998ರ ಅಧಿನಿಯಮ ಸಂಖ್ಯೆ 30ರ ಮೇರೆಗೆ 24-11-1998 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ಡಿ) ಕರ್ನಾಟಕ ವಿಧಾನ ಪರಿಷತ್ತಿನ ಕಾರ್ಯದರ್ಶಿಯು,
ಪ್ರಾಧಿಕಾರದ ಕಾರ್ಯದರ್ಶಿಯಾಗಿರತಕ್ಕದ್ದು.][3]

(5) ಸದರಿ ನಿಧಿಯಲ್ಲಿ ಜಮೆ ಇರುವ ಮೊತ್ತವನ್ನು ನಿಯಮಿಸಬಹುದಾದಂಥ ನಿಯಮಗಳಿಗೆ ಒಳಪಟ್ಟು ಈ ಕೆಳಕಂಡ ವ್ಯಕ್ತಿಗಳ ಪ್ರಯೋಜನಕ್ಕಾಗಿ ಅಥವಾ ಕಲ್ಯಾಣಕ್ಕಾಗಿ ಅನ್ವಯಿಸತಕ್ಕದ್ದು ಅಥವಾ ತೊಡಗಿಸತಕ್ಕದ್ದು ಅಥವಾ ಖರ್ಚು ಮಾಡತಕ್ಕದ್ದು,-

(i) 11ಎ ಪ್ರಕರಣದ ಮೇರೆಗೆ ನಿವೃತ್ತಿ ವೇತನಕ್ಕೆ ಹಕ್ಕುದಾರರಾದ ವ್ಯಕ್ತಿಗಳು;

(ii) ವಿಧಾನ ಸಭೆ ಅಥವಾ ವಿಧಾನ ಪರಿಷತ್ತಿನ ಸದಸ್ಯರಾಗಿ ಸೇವೆ ಸಲ್ಲಿಸುತ್ತಿರುವಾಗ ಮೃತರಾದ ವ್ಯಕ್ತಿಗಳ ಕುಟುಂಬ;

(iii)(i) ನೇ ಖಂಡದಲ್ಲಿ ಉಲ್ಲೇಖಿಸಲಾದ ವ್ಯಕ್ತಿಗಳ ಮರಣದ ತರುವಾಯ ಅವರ ಕುಟುಂಬ;

**ಟಿಪ್ಪಣಿ:-** ಈ ಪ್ರಕರಣದ ಉದ್ದೇಶಕ್ಕಾಗಿ ಕುಟುಂಬ ಎಂದರೆ, 11ಬಿ ಪ್ರಕರಣದ (1)ನೇ ಉಪ-ಪ್ರಕರಣದ ವಿವರಣೆಯಲ್ಲಿ ಅದಕ್ಕೆ ನೀಡಲಾಗಿರುವ ಅದೇ ಅರ್ಥವನ್ನು ಹೊಂದಿರತಕ್ಕದ್ದು.][3]

**14. ಉಳಿಸುವಿಕೆ:-** ಈ ಅಧಿನಿಯಮದಲ್ಲಿರುವುದಾವುದೂ ಒಬ್ಬ ನಿವೃತ್ತ ಸರ್ಕಾರಿ ನೌಕರನನ್ನು, ಈ ಅಧಿನಿಯಮದ ಮೇರೆಗೆ ಅವನು ಹಕ್ಕುಳ್ಳವನಾಗಿರಬಹುದಾದ ಯಾವುದೇ ಸಂಬಳ ಅಥವಾ ಭತ್ಯೆಯ ಜೊತೆಗೆ ತನ್ನ ನಿವೃತ್ತಿ ವೇತನವನ್ನು ಪಡೆಯುವುದರಿಂದ ಪ್ರತಿಬಂಧಿಸತಕ್ಕದ್ದಲ್ಲ.

**15. ನಿಯಮ ರಚನಾಧಿಕಾರ:-** (1) ರಾಜ್ಯ ಸರ್ಕಾರವು, [1][ಕರ್ನಾಟಕ ರಾಜ್ಯಪತ್ರ][1]ದಲ್ಲಿ ಅಧಿಸೂಚನೆ ಮೂಲಕ ಈ ಅಧಿನಿಯಮದ ಉದ್ದೇಶವನ್ನು ಜಾರಿಗೊಳಿಸಲು ನಿಯಮಗಳನ್ನು ರಚಿಸಬಹುದು.

[2][(1ಎ) ಈ ಅಧಿನಿಯಮದ ಮೇರೆಗಿನ ಯಾವುದೇ ನಿಯಮವನ್ನು ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ರಚಿಸಬಹುದು ಮತ್ತು ಯಾವುದೇ ಅಂಥ ನಿಯಮವನ್ನು ರಚಿಸಿದ್ದರೆ, ಅಂಥ ನಿಯಮದ ರಚನೆಗೆ ಉಂಟಾದ ಕಾರಣಗಳನ್ನು ನಿರ್ದಿಷ್ಟಪಡಿಸುವ ಒಂದು ವಿವರಣೆಯನ್ನು (2)ನೇ ಉಪ-ಪ್ರಕರಣದ ಮೇರೆಗಿನ ನಿಯಮದೊಂದಿಗೆ ರಾಜ್ಯ ವಿಧಾನ ಮಂಡಲದ ಉಭಯ ಸದನಗಳ ಮುಂದೆ ಮಂಡಿಸತಕ್ಕದ್ದು.][2]

[3][(2) ಈ ಪ್ರಕರಣದ ಮೇರೆಗೆ ರಚಿಸಲಾದ ಪ್ರತಿಯೊಂದು ನಿಯಮವನ್ನು, ಅದನ್ನು ರಚಿಸಿದ ತರುವಾಯ ಆದಷ್ಟು ಬೇಗನೆ ರಾಜ್ಯ ವಿಧಾನ ಮಂಡಲದ ಪ್ರತಿಯೊಂದು ಸದನದ ಮುಂದೆ, ಅದು ಅಧಿವೇಶನದಲ್ಲಿರುವಾಗ, ಒಂದು ಅಥವಾ ಎರಡು ಅಥವಾ ಅದಕ್ಕಿಂತ ಹೆಚ್ಚು ಅಧಿವೇಶಗಳಲ್ಲಿ ಅಡಕವಾಗಬಹುದಾದಂಥ ಮೂವತ್ತು ದಿವಸಗಳ ಒಟ್ಟು ಅವಧಿಗೆ ಇಡತಕ್ಕದ್ದು ಮತ್ತು ಅದನ್ನು ಹಾಗೆ ಇರಿಸಲಾದ ಅಧಿವೇಶವು ಅಥವಾ ಅದರ ನಿಕಟ ತರುವಾಯದ ಅಧಿವೇಶನವು ಮುಕ್ತಾಯವಾಗುವುದಕ್ಕೆ ಮುಂಚೆ ರಾಜ್ಯ ವಿಧಾನ ಮಂಡಲದ ಎರಡೂ ಸದನಗಳು ಯಾವುದೇ ನಿಯಮದಲ್ಲಿ ಯಾವುದೇ ಮಾರ್ಪಾಟನ್ನು ಮಾಡಲು ಒಪ್ಪಿದರೆ ಅಥವಾ ಯಾವುದೇ ನಿಯಮವನ್ನು ರಚಿಸತಕ್ಕದ್ದಲ್ಲ ಎಂದು ಒಪ್ಪಿದರೆ ಆ ನಿಯಮಗಳು ಆ ತರುವಾಯ ಸಂದರ್ಭಾನುಸಾರ ಅಂಥ ಮಾರ್ಪಾಟಾದ ರೂಪದಲ್ಲಿ ಮಾತ್ರ ಪರಿಣಾಮ ಹೊಂದಿರತಕ್ಕದ್ದು ಅಥವಾ ಪರಿಣಾಮ ಹೊಂದಿರತಕ್ಕದ್ದಲ್ಲ; ಆದಾಗ್ಯೂ, ಅಂಥ ಯಾವುದೇ ಮಾರ್ಪಾಟು ಅಥವಾ ರದ್ದಿಯಾತಿಯು ಸದರಿ ನಿಯಮದ ಮೇರೆಗೆ ಈ ಹಿಂದೆ ಮಾಡಲಾದ ಯಾವುದೇ ಕಾರ್ಯದ ಸಿಂಧುತ್ವಕ್ಕೆ ಬಾಧಕವಾಗತಕ್ಕದ್ದಲ್ಲ.][3]

[4][(3) ಈ ಅಧಿನಿಯಮದಲ್ಲಿ ಏನೇ ಇದ್ದರೂ, ವಿಧಾನಸಭೆ ಮತ್ತು ವಿಧಾನ ಪರಿಷತ್ತಿನ ಸದಸ್ಯರು, ಸಭಾಪತಿ, ಉಪ-ಸಭಾಪತಿ, ಸಭಾಧ್ಯಕ್ಷ, ಉಪ-ಸಭಾಧ್ಯಕ್ಷ, ವಿರೋಧ ಪಕ್ಷದ ನಾಯಕ ಮತ್ತು ಸರ್ಕಾರಿ ಮುಖ್ಯ ಸಚೇತಕ- ಇವರಿಗೆ ಸಂಬಂಧಿಸಿದಂತೆ ಮತ್ತು ಅವರ ಸಂಬಳ, ಭತ್ಯಗಳು, ನಿವೃತ್ತಿ ವೇತನಗಳು, ವೈದ್ಯಕೀಯ ಬಿಲ್ಲುಗಳು, ವಸತಿ ವ್ಯವಸ್ಥೆ, ಆಪ್ತ ಸಿಬ್ಬಂದಿ ಪ್ರಯಾಣಗಳು, ಮತ್ತು ಎಲ್ಲ ಬಗೆಯ ಸೌಲಭ್ಯಗಳಿಗೆ ಸಂಬಂಧಿಸಿದಂತೆ, ಈ ಅಧಿನಿಯಮದ ಮೇರೆಗೆ ರಚಿಸಬಹುದಾದ ಅಥವಾ ಹೊರಡಿಸಬಹುದಾದ ಇಲ್ಲವೇ ರಚಿಸಲು ಅಥವಾ ಹೊರಡಿಸಲು ಅಗತ್ಯಪಡಿಸಬಹುದಾದ ಯಾವುದೇ ಇತರ ಕಾನೂನು, ನಿಯಮ ಅಥವಾ ಆದೇಶ, ಎಲ್ಲಾ ನಿಯಮಗಳು, ಅಧಿಸೂಚನೆಗಳು ಮತ್ತು ಆದೇಶಗಳನ್ನು ಕರ್ನಾಟಕ ವಿಧಾನ ಮಂಡಲದ ಕಾರ್ಯದರ್ಶಿಯು, ಸಭಾಪತಿ, ಸಭಾಧ್ಯಕ್ಷ, ಮುಖ್ಯಮಂತ್ರಿ ಮತ್ತು ಸಂಸದೀಯ ವ್ಯವಹಾರಗಳ ಪ್ರಭಾರಹೊಂದಿರುವ ಸಚಿವ, ಇವರನ್ನೊಳಗೊಂಡ ವಿಶೇಷ ಮಂಡಲಿಯು ಹಣಕಾಸು ಇಲಾಖೆ ಮತ್ತು ನಿಯಮಿಸಬಹುದಾದಂಥ ರಾಜ್ಯ ಸರ್ಕಾರದ ವ್ಯಕ್ತಿ, ಮಂಡಲಿ, ಪ್ರಾಧಿಕಾರ ಅಥವಾ ಇಲಾಖೆಯೊಂದಿಗೆ ಸಮಾಲೋಚಿಸಿ ಅನುಮೋದಿಸಿದ ನಂತರ ರಚಿಸತಕ್ಕದ್ದು ಅಥವಾ ಹೊರಡಿಸತಕ್ಕದ್ದು.][4]

1. 1973ರ ಕರ್ನಾಟಕ ಕಾನೂನು ಅಳವಡಿಕೆಗಳ ಆದೇಶದ ಮೂಲಕ 1.11.1973 ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.
2. 1968ರ ಅಧಿನಿಯಮ ಸಂಖ್ಯೆ 18ರ ಮೂಲಕ 1.11.1956 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
3. 1960ರ ಅಧಿನಿಯಮ ಸಂಖ್ಯೆ 10ರ ಮೂಲಕ 1.1.1960 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
4. 1985ರ ಅಧಿನಿಯಮ ಸಂಖ್ಯೆ 14ರ ಮೂಲಕ 29.09.1984 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**16. 1956ರ ಕರ್ನಾಟಕ ಅಧ್ಯಾದೇಶ ಸಂಖ್ಯೆ 3ರ ನಿರಸನ ಮತ್ತು ಉಳಿಸುವಿಕೆಗಳು:-** ಕರ್ನಾಟಕ ವಿಧಾನ ಮಂಡಲ ಸಂಬಳಗಳ ಅಧ್ಯಾದೇಶ, 1956 ನ್ನು ಈ ಮೂಲಕ ನಿರಸನಗೊಳಿಸಲಾಗಿದೆ. ಆದರೆ, ಸದರಿ ಅಧ್ಯಾದೇಶದ ಮೇರೆಗೆ ರಚಿಸಿದ ಯಾವುದೇ ನಿಯಮಗಳು, ಮಾಡಿದ ಯಾವುದೇ ಕಾರ್ಯ ಅಥವಾ ಕೈಗೊಂಡ ಯಾವುದೇ ಕ್ರಮವನ್ನು 1956ರ ನವೆಂಬರ್ ಮೊದಲನೇ ದಿವಸದಂದು ಈ ಅಧಿನಿಯಮವು ಜಾರಿಗೆ ಬಂದಿದ್ದರೆ ಹೇಗೋ ಹಾಗೆ ಈ ಅಧಿನಿಯಮದ ಮೇರೆಗೆ ರಚಿಸಲಾಗಿದೆ, ಮಾಡಲಾಗಿದೆ, ಅಥವಾ ಕೈಗೊಳ್ಳಲಾಗಿದೆ ಎಂದು ಭಾವಿಸತಕ್ಕದ್ದು ಮತ್ತು ಸದರಿ ಅಧ್ಯಾದೇಶದ ಮೇರೆಗೆ ರಚಿಸಿದ ಎಲ್ಲಾ ನಿಯಮಗಳನ್ನು ಈ ಅಧಿನಿಯಮವನ್ನು ಅಂಗೀಕರಿಸಿದ ತರುವಾಯ ಆದಷ್ಟು ಬೇಗನೆ ರಾಜ್ಯ ವಿಧಾನ ಮಂಡಲದ ಪ್ರತಿಯೊಂದು ಸದನದ ಮುಂದೆ ಅದು ಅಧಿವೇಶನದಲ್ಲಿರುವಾಗ ಒಂದು ಅಥವಾ ಎರಡು ಅಥವಾ ಅದಕ್ಕಿಂತ ಹೆಚ್ಚು ಅಧಿವೇಶನಗಳಲ್ಲಿ ಅಡಕವಾಗಬಹುದಾದಂಥ ಒಟ್ಟು ಒಂದು ತಿಂಗಳ ಅವಧಿಯವರೆಗೆ ಇಡತಕ್ಕದ್ದು ಮತ್ತು ಸದರಿ ಅವಧಿಯು ಮುಕ್ತಾಯವಾಗುವುದಕ್ಕೆ ಮುಂಚೆ, ರಾಜ್ಯ ವಿಧಾನ ಮಂಡಲದ ಯಾವುದೇ ಸದನವು ಈ ನಿಯಮಗಳಲ್ಲಿ ಯಾವುದೇ ಮಾರ್ಪಾಟನ್ನು ಮಾಡಿದರೆ ಅಥವಾ ಯಾವುದೇ ನಿಯಮವು ಪರಿಣಾಮಹೊಂದಿರತಕ್ಕದ್ದಲ್ಲವೆಂದು ನಿರ್ದೇಶಿಸಿದರೆ ಮತ್ತು ಆ ಮಾರ್ಪಾಟು ಅಥವಾ ನಿರ್ದೇಶನಕ್ಕೆ ಇನ್ನೊಂದು ಸದನವು ಒಪ್ಪಿದರೆ, ಆ ತರುವಾಯ, ಆ ನಿಯಮಗಳು ಸಂದರ್ಭಾನುಸಾರ, ಅಂಥ ಮಾರ್ಪಾಟಾದ ರೂಪದಲ್ಲಿ ಮಾತ್ರ ಪರಿಣಾಮಕಾರಿಯಾಗತಕ್ಕದ್ದು ಅಥವಾ ಪರಿಣಾಮಕಾರಿಯಾಗತಕ್ಕದ್ದಲ್ಲ.

The above translation of The Karnataka Legislature Salaries, Pensions and Allowances Act, 1956 (2 of 1957) shall be authoritative text in the Kannada Language under section 5A of the Karnataka Official Language Act, 1963 (Karnataka Act 26 of 1963)

**GOVERNOR OF KARNATAKA**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
ಜಿ. ದಕ್ಷಿಣಾಮೂರ್ತಿ
ಸರ್ಕಾರದ ಕಾರ್ಯದರ್ಶಿ,
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ

ಪಿ.ಆರ್.164

**ಸಹಕಾರ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಿಎಂಡಬ್ಲ್ಯೂ 87 ಸಿಎನ್‌ಎಸ್ 2004 ಬೆಂಗಳೂರು, ದಿನಾಂಕ: 5ನೇ ಮಾರ್ಚ್ 2005**

ಸರ್ಕಾರವು, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 53ಎರ ಮೇರೆಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ನಿಂಗಣ್ಣ ನೀರಡಗಿ, ಜೇವರ್ಗಿ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ ಇವರನ್ನು ಕರ್ನಾಟಕ ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕ್ ನಿ., ಚಾಮರಾಜಪೇಟೆ, ಬೆಂಗಳೂರು-18 ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮ ನಿರ್ದೇಶನ ಮಾಡಿದೆ.

ಪಿ.ಆರ್.161

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
ಆರ್. ಎಸ್. ಹುಚ್ಚಾಚಾರಿ
ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

**ಅಧಿಸೂಚನೆ**

**ಸಂಖ್ಯೆ: ಸಿಎಂಡಬ್ಲ್ಯೂ 109 ಸಿಎನ್‌ಎಸ್ 2004 ಬೆಂಗಳೂರು, ದಿನಾಂಕ: 10ನೇ ಮಾರ್ಚ್ 2005**

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 16 ಎನ್‌ಎಂಎಸ್ 2000 ದಿನಾಂಕ: 23.09.2002ರಲ್ಲಿ ದಿ ಸೆಂಟ್ರಲ್ ಅರೆಕಾನೆಟ್ ಅಂಡ್ ಕೋಕೋ ಮಾರ್ಕೆಟಿಂಗ್ ಅಂಡ್ ಪ್ರೊಸೆಸಿಂಗ್ ಕೋ-ಆಪರೇಟಿವ್ ಲಿ., ಮಂಗಳೂರು (ಕ್ಯಾಂಪ್ಕೋ) ಇದರ ಆಡಳಿತ ಮಂಡಳಿಗೆ ಮಾಡಿದ್ದ ಶ್ರೀ ಬಿ. ಕೆ. ಕೃಷ್ಣರಾಜ್ ಅರಸ್, ವಕೀಲರು, ಕೆ. ಆರ್. ನಗರ, ಮೈಸೂರು ಜಿಲ್ಲೆ ಇವರ ನಾಮನಿರ್ದೇಶನವನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಇವರ ಸ್ಥಾನದಲ್ಲಿ ದಿ ಸೆಂಟ್ರಲ್ ಅರೆಕಾನೆಟ್ ಅಂಡ್ ಕೋಕೋ ಮಾರ್ಕೆಟಿಂಗ್ ಅಂಡ್ ಪ್ರೊಸೆಸಿಂಗ್ ಕೋ-ಆಪರೇಟಿವ್ ಲಿ., ಮಂಗಳೂರು (ಕ್ಯಾಂಪ್ಕೋ) ಇದರ ಬೈಲಾ ಸಂಖ್ಯೆ: 16(1) (ಸಿ) ಪ್ರಕಾರ ಕರ್ನಾಟಕ ಸರ್ಕಾರವು ಶ್ರೀ ಐವನ್ ಡಿಸೋಜ, ನ್ಯಾಯವಾದಿಗಳು ಮಂಗಳೂರು ಇವರನ್ನು ದಿ ಸೆಂಟ್ರಲ್ ಅರೆಕಾನೆಟ್ ಅಂಡ್ ಕೋಕೋ ಮಾರ್ಕೆಟಿಂಗ್ ಅಂಡ್ ಪ್ರೊಸೆಸಿಂಗ್ ಕೋ-ಆಪರೇಟಿವ್ ಲಿ., ಮಂಗಳೂರು (ಕ್ಯಾಂಪ್ಕೋ) ಇದರ ಆಡಳಿತ ಮಂಡಳಿಯ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮ ನಿರ್ದೇಶನ ಮಾಡಿದೆ.

ಪಿ.ಆರ್.162

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
ಆರ್. ಎಸ್. ಹುಚ್ಚಾಚಾರಿ
ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ: ಸಂವ್ಯಶಾಇ 13 ರಾಶಾಪ್ರ 2005, ಬೆಂಗಳೂರು, ದಿನಾಂಕ: 20ನೇ ಮೇ 2005**

ಕರ್ನಾಟಕ ಉಗ್ರಾಣಗಳ ಅಧಿನಿಯಮ, 1961 ಮತ್ತು ಕರ್ನಾಟಕ ಉಗ್ರಾಣಗಳ ನಿಯಮಗಳು 1969ರ ಅಧಿಕೃತ ಕನ್ನಡ ಭಾಷಾಂತರವನ್ನು ಕರ್ನಾಟಕ ಅಫಿಷಿಯಲ್ ಲಾಂಗ್ವೇಜ್ ಆಕ್ಟ್, 1963ರ ಪ್ರಕರಣ 5ಎ ಅಡಿಯಲ್ಲಿ ರಾಜ್ಯಪಾಲರ ಅಧಿಕಾರದ ಮೇರೆಗೆ ಸಾರ್ವಜನಿಕರ ಮಾಹಿತಿಗಾಗಿ ಕರ್ನಾಟಕ ರಾಜ್ಯಪತ್ರದಲ್ಲಿ ಮರು ಪ್ರಕಟಿಸಲು ಆದೇಶಿಸಲಾಗಿದೆ.

# ಕರ್ನಾಟಕ ಉಗ್ರಾಣಗಳ ಅಧಿನಿಯಮ, 1961

## ಪ್ರಕರಣಗಳ ಅನುಕ್ರಮಣಿಕೆ

ಪ್ರಕರಣಗಳು

## ಅಧ್ಯಾಯ-V
## ಉಗ್ರಾಣ ರಸೀದಿಗಳು

26. ನೀಡಬೇಕಾದ ರಸೀದಿ
27. ಉಗ್ರಾಣಗಳಲ್ಲಿ ಸರಕು ದಾಸ್ತಾನು ಇಡುವುದಕ್ಕೆ ರಸೀದಿಗಳು
28. ರಸೀದಿಯ ದ್ವಿಪ್ರತಿ

## ಅಧ್ಯಾಯ-VI
## ಸಂಕೀರ್ಣ

29. ಅಪೀಲುಗಳು, ವಿವಾದಗಳು ಮತ್ತು ದೂರುಗಳ ತೀರ್ಮಾನ
30. ಲೈಸೆನ್ಸ್‌ನ್ನು ತಡೆಹಿಡಿದುದಕ್ಕಾಗಿ ಅಥವಾ ರದ್ದುಗೊಳಿಸಿದುದಕ್ಕಾಗಿ ಯಾವುದೇ ನಷ್ಟ ಪರಿಹಾರವಿಲ್ಲದಿರುವುದು
31. ಭದ್ರತಾ ಮೊಬಲಗನ್ನು ಮುಟ್ಟುಗೋಲು ಹಾಕಿಕೊಳ್ಳುವುದು ಮತ್ತು ಅದನ್ನು ಭೂಕಂದಾಯದ ಬಾಕಿಯಂತೆ ವಸೂಲು ಮಾಡುವುದು
32. ಅಧಿನಿಯಮಕ್ಕೆ ಅಸಂಗತವಾದ ಕರಾರುಗಳು ಮತ್ತು ಒಪ್ಪಂದಗಳು ಶೂನ್ಯವಾಗತಕ್ಕದ್ದು
32ಎ. ಉಗ್ರಾಣಪಾಲಕರು ಮತ್ತು ಸರಕು ದಾಸ್ತಾನುದಾರರು 1944ರ ಕೇಂದ್ರ ಅಧಿನಿಯಮ 1ರ ಉಪಬಂಧಗಳನ್ನು ಪಾಲಿಸುವುದು
33. ದಂಡ
34. ನಿಯಮಗಳು
35. ಅಧಿನಿಯಮವು ಕೆಲವು ಉಗ್ರಾಣಗಳಿಗೆ ಅನ್ವಯವಾಗದಿರುವುದು
36. ನಿರಸನ ಮತ್ತು ಉಳಿಸುವಿಕೆಗಳು.

ಅನುಸೂಚಿ

ಅಧಿಸೂಚನೆ

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ
## I

**1962ರ ಅಧಿನಿಯಮ 11.–** ಕೇಂದ್ರ ಮತ್ತು ರಾಜ್ಯ ಉಗ್ರಾಣ ವ್ಯವಸ್ಥೆ ನಿಗಮಗಳ ಸ್ಥಾಪನೆಗೆ ಉಪಬಂಧ ಕಲ್ಪಿಸುವ ಕೃಷಿ ಉತ್ಪನ್ನ (ಅಭಿವೃದ್ಧಿ ಮತ್ತು ಉಗ್ರಾಣ ವ್ಯವಸ್ಥೆ) ನಿಗಮ ಅಧಿನಿಯಮ, 1956ನ್ನು ಸಂಸತ್ತು ಅಂಗೀಕರಿಸಿದೆ. ತದನುಸಾರವಾಗಿ, ಈ ಸರ್ಕಾರವು ರಾಜ್ಯ ಉಗ್ರಾಣ ನಿಗಮವನ್ನು ಸ್ಥಾಪಿಸಿದೆ. ಈ ನಿಗಮದ ಕಾರ್ಯಾಚರಣೆಯಾಗಬೇಕಿದ್ದರೆ ಉಗ್ರಾಣ ವ್ಯವಸ್ಥೆಗೆ ಸಂಬಂಧಿಸಿದಂತೆ ಒಂದು ಸೂಕ್ತ ಶಾಸನವನ್ನು ಅಂಗೀಕರಿಸುವುದು ಅಗತ್ಯವಾಗಿದೆ. ಪ್ರಸ್ತಾವಿತ ವಿಧೇಯಕವು, ರಾಜ್ಯಗಳು ಅಳವಡಿಸಿಕೊಳ್ಳುವುದಕ್ಕಾಗಿ ಭಾರತ ಸರ್ಕಾರವು ಕಳುಹಿಸಿದ ಮಾದರಿ ಕರಡು ವಿಧೇಯಕವನ್ನು ಆಧರಿಸಿದೆ ಮತ್ತು ಸ್ವತಂತ್ರ ಉಗ್ರಾಣಗಳ ಸ್ಥಾಪನೆ, ಮೇಲ್ವಿಚಾರಣೆ ಮತ್ತು ನಿಯಂತ್ರಣಕ್ಕಾಗಿ ಹೊಸ ಮೈಸೂರಿನ ಎಲ್ಲ ಐದು ಸಂಯೋಜಿತ ಪ್ರದೇಶಗಳಲ್ಲಿ ಒಂದು ಏಕರೂಪದ ಕಾನೂನನ್ನು ತರಲು ಉದ್ದೇಶಿಸಿದೆ.

ಈ ವಿಧೇಯಕದ ಮುಖ್ಯ ಅಂಶಗಳೆಂದರೆ:-

(1) ಲೈಸೆನ್ಸ್ ಇಲ್ಲದ ವ್ಯಕ್ತಿಗಳು ಉಗ್ರಾಣ ಪಾಲಕನ ವ್ಯವಹಾರ ನಡೆಸುವುದನ್ನು ನಿಷೇಧಿಸುವುದು;

(2) ಉಗ್ರಾಣಪಾಲಕನ ಕೆಲವು ಕರ್ತವ್ಯಗಳನ್ನು ನಿಯಮಿಸುವುದು;

(3) ಸರಕುಗಳ ಪರಿಶೀಲನೆ ಹಾಗೂ ಶ್ರೇಣೀಕರಣ; ಮತ್ತು

(4) ಉಗ್ರಾಣ ರಸೀದಿಗಳನ್ನು ನೀಡುವುದು.

(1959ರ ಜುಲೈ 21 ನೇ ದಿನಾಂಕದ ವಿ.ಪ. ವಿಧೇಯಕ ಸಂ. 601ರಿಂದ ಪಡೆಯಲಾಗಿದೆ) (ಕಡತ ಸಂ. ಲಾ 56 ಎಲ್‌ಜಿಎನ್ 58)

## II

**1965ರ ಅಧಿನಿಯಮ 22ಕ್ಕೆ ತಿದ್ದುಪಡಿ.–** ಉಗ್ರಾಣದಲ್ಲಿ ದಾಸ್ತಾನು ಇಟ್ಟಿರುವ ಸರಕುಗಳಿಗೆ ಸಂಬಂಧಿಸಿದಂತೆ, ಪ್ರತಿಯೊಬ್ಬ ಉಗ್ರಾಣ ಪಾಲಕ ಮತ್ತು ದಾಸ್ತಾನುದಾರನು ಕೇಂದ್ರ ಅಬಕಾರಿ ಮತ್ತು ಉಪ್ಪು ಅಧಿನಿಯಮ, 1944ರ ಉಪಬಂಧಗಳು ಮತ್ತು ಅದರ ಅಡಿಯಲ್ಲಿ ರಚಿಸಲಾದ ನಿಯಮಗಳು ಮತ್ತು ಹೊರಡಿಸಲಾದ ಆದೇಶಗಳನ್ನು ಪಾಲಿಸುವ ಸಲುವಾಗಿ, ಉಗ್ರಾಣಪಾಲಕ ಮತ್ತು ದಾಸ್ತಾನುದಾರನ ಮೇಲೆ ಒಂದು ಸ್ಪಷ್ಟ ಹೊಣೆಗಾರಿಕೆಯನ್ನು ವಿಧಿಸುವುದು ಅಗತ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(1965ರ ಫೆಬ್ರವರಿ 18 ನೇ ದಿನಾಂಕದ ವಿ.ಸ. ವಿಧೇಯಕ ಸಂ 14198 ರಿಂದ ಪಡೆಯಲಾಗಿದೆ) (ಕಡತ ಸಂ. ಲಾ 13 ಎಲ್‌ಜಿಎನ್ 65).

1962ರ [1][ಕರ್ನಾಟಕ ಅಧಿನಿಯಮ][1] ಸಂಖ್ಯೆ 11

(1962ರ ಮಾರ್ಚ್ ಇಪ್ಪತ್ತೊಂಬತ್ತನೇ ದಿನಾಂಕದಂದು [1][ಕರ್ನಾಟಕ ರಾಜ್ಯಪತ್ರ][1] ದಲ್ಲಿ ಮೊದಲು ಪ್ರಕಟಿಸಲಾಗಿದೆ)

# [1][ಕರ್ನಾಟಕ][1] ಉಗ್ರಾಣಗಳ ಅಧಿನಿಯಮ, 1961

(1962ರ ಮಾರ್ಚ್ ಏಳನೇ ದಿನಾಂಕದಂದು ರಾಷ್ಟ್ರಾಧ್ಯಕ್ಷರ ಅನುಮೋದನೆಯನ್ನು ಪಡೆಯಲಾಗಿದೆ)

(1965ರ ಕರ್ನಾಟಕ ಅಧಿನಿಯಮ 22 ರಿಂದ ತಿದ್ದುಪಡಿಯಾದಂತೆ.)

**[1][ಕರ್ನಾಟಕ ರಾಜ್ಯ][1] ದಲ್ಲಿನ ಉಗ್ರಾಣಗಳನ್ನು ವಿನಿಯಮಿಸಲು ಮತ್ತು ಅವುಗಳಿಗೆ ಲೈಸೆನ್ಸ್ ನೀಡಲು ಉಪಬಂಧ ಕಲ್ಪಿಸುವ ಒಂದು ಅಧಿನಿಯಮ.**

ಸ್ವತಂತ್ರ ಉಗ್ರಾಣಗಳ ಸ್ಥಾಪನೆಗೆ ಪ್ರೋತ್ಸಾಹ ನೀಡುವುದು ಮತ್ತು ಅವುಗಳ ಮೇಲ್ವಿಚಾರಣೆ ಹಾಗೂ ನಿಯಂತ್ರಣಕ್ಕಾಗಿ ಉಪಬಂಧಗಳನ್ನು ಕಲ್ಪಿಸುವುದು ಯುಕ್ತವಾಗಿರುವುದರಿಂದ;

ಭಾರತ ಗಣರಾಜ್ಯದ ಹನ್ನೆರಡನೇ ವರ್ಷದಲ್ಲಿ [1][ಕರ್ನಾಟಕ ರಾಜ್ಯ][1] ವಿಧಾನ ಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು, ಎಂದರೆ:-

## ಅಧ್ಯಾಯ-I

## ಪ್ರಾರಂಭಿಕ

**1. ಚಿಕ್ಕ ಹೆಸರು, ವ್ಯಾಪ್ತಿ ಮತ್ತು ಪ್ರಾರಂಭ.-** (1) ಈ ಅಧಿನಿಯಮವನ್ನು [1][ಕರ್ನಾಟಕ][1] ಉಗ್ರಾಣಗಳ ಅಧಿನಿಯಮ, 1961 ಎಂದು ಕರೆಯತಕ್ಕದ್ದು.

(2) ಇದು ಇಡೀ [1][ಕರ್ನಾಟಕ ರಾಜ್ಯಕ್ಕೆ][1] ವ್ಯಾಪ್ತವಾಗತಕ್ಕದ್ದು.

(3) ಇದು ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದಂಥ [2][ದಿನಾಂಕ][2] ದಂದು ಜಾರಿಗೆ ಬರತಕ್ಕದ್ದು.

**2. ಪರಿಭಾಷೆಗಳು.-** ಈ ಅಧಿನಿಯಮದಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,-

(ಎ) "ಸಹಕಾರ ಸಂಘ" ಎಂದರೆ [1][ಕರ್ನಾಟಕ][1] ಸಹಕಾರ ಸಂಘಗಳ ಅಧಿನಿಯಮ, 1959ರ (1959ರ [1][ಕರ್ನಾಟಕ][1] ಅಧಿನಿಯಮ 11) ಅಡಿಯಲ್ಲಿ ನೋಂದಾಯಿಸಲಾದ ಅಥವಾ ನೋಂದಾಯಿಸಲಾಗಿದೆಯೆಂದು ಭಾವಿಸಲಾದ ಒಂದು ಸಂಘ;

(ಬಿ) "ಸರಕು ದಾಸ್ತಾನುದಾರ" ಎಂದರೆ ತನ್ನ ಸರಕುಗಳನ್ನು ಉಗ್ರಾಣ ಪಾಲಕನ ಉಗ್ರಾಣದಲ್ಲಿ ದಾಸ್ತಾನು ಮಾಡುವುದಕ್ಕಾಗಿ, ಅವನಿಗೆ ನೀಡುವ ಒಬ್ಬ ವ್ಯಕ್ತಿ ಮತ್ತು ಅದರಲ್ಲಿ ಅಂಥ ಸರಕುಗಳಿಗೆ ಸಂಬಂಧಿಸಿದಂತೆ ಉಗ್ರಾಣಪಾಲಕನು ನೀಡಿದ ರಸೀತಿಯನ್ನು ಕಾನೂನು ಸಮ್ಮತವಾಗಿ ಹೊಂದಿರುವ ಮತ್ತು ಸರಕು ದಾಸ್ತಾನುದಾರನಿಂದ ಅಥವಾ ಸರಕು ದಾಸ್ತಾನುದಾರನ ಕಾನೂನು ಸಮ್ಮತ ವರ್ಗಾವಣೆ ಪಡೆದವನಿಂದ ಒಂದು ಯುಕ್ತ ಹಿಂಬರಹದ ಮೂಲಕ ಅಥವಾ ಅದರ ವರ್ಗಾವಣೆಯ ಮೂಲಕ ಅದಕ್ಕೆ ಹಕ್ಕನ್ನು ಪಡೆದ ಯಾರೇ ವ್ಯಕ್ತಿಯು ಸೇರುತ್ತಾನೆ;

(ಸಿ) "ಸರಕುಗಳು" ಎಂದರೆ ಈ ಅಧಿನಿಯಮದ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವ ಯಾವುವೇ ವಸ್ತುಗಳು;

(ಡಿ) **"ಲೈಸೆನ್ಸ್ ಪಡೆದಿರುವ ಉಗ್ರಾಣ"** ಎಂದರೆ ಈ ಅಧಿನಿಯಮದ ಅಡಿಯಲ್ಲಿ ಲೈಸೆನ್ಸ್ ಪಡೆದಿರುವ ಉಗ್ರಾಣ;

(ಇ) "ಅಧಿಸೂಚನೆ" ಎಂದರೆ ರಾಜ್ಯಪತ್ರದಲ್ಲಿ ಪ್ರಕಟಿಸಲಾದ ಒಂದು ಅಧಿಸೂಚನೆ;

---

1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ, 1973ರ ಮೂಲಕ 01.11.1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.
2. ಈ ಅಧಿನಿಯಮವು ಅಧಿಸೂಚನೆಯ ಮೂಲಕ 1.9.1969ರಿಂದ ಜಾರಿಗೆ ಬಂದಿದೆ. ಅಧಿಸೂಚನೆಯ ಪಾಠವು 13ನೇ ಪುಟದಲ್ಲಿದೆ.

(ಎಫ್) "ವ್ಯಕ್ತಿ" ಎಂಬುದರಲ್ಲಿ ಯಾವುದೇ ಕಂಪನಿ ಅಥವಾ ಸಂಘ ಅಥವಾ ನಿಗಮಿತ ನಿಕಾಯವು ಒಳಗೊಳ್ಳುತ್ತದೆ;

(ಜಿ) "ನಿಯಮಿಸಲಾದುದು" ಎಂದರೆ ಈ ಅಧಿನಿಯಮದ ಅಡಿಯಲ್ಲಿ ರಚಿಸಿದ ನಿಯಮಗಳ ಮೂಲಕ ನಿಯಮಿಸಲಾದುದು;

(ಹೆಚ್) ಈ ಅಧಿನಿಯಮದ ಯಾವುದೇ ಉಪಬಂಧದ ಸಂಬಂಧದಲ್ಲಿ "ನಿಯಮಿಸಲಾದ ಪ್ರಾಧಿಕಾರ" ಎಂದರೆ ಅಂಥ ಉಪಬಂಧವನ್ನು ಕಾರ್ಯಗತಗೊಳಿಸಲು ನಿಯಮಗಳ ಮೂಲಕ ನಿಯಮಿಸಲಾದ ಪ್ರಾಧಿಕಾರ;

(ಐ) "ರಸೀದಿ" ಎಂದರೆ ಉಗ್ರಾಣದಲ್ಲಿ ಸರಕುಗಳನ್ನು ದಾಸ್ತಾನು ಇಡುವ ಒಬ್ಬ ವ್ಯಕ್ತಿಗೆ ನಿಯಮಿಸಲಾದ ನಮೂನೆಯಲ್ಲಿ ಉಗ್ರಾಣ ಪಾಲಕನು ನೀಡಿದ ಒಂದು ಉಗ್ರಾಣ ರಸೀದಿ;

(ಜೆ) "ನಿಯಮಗಳು" ಎಂದರೆ ಈ ಅಧಿನಿಯಮದ ಅಡಿಯಲ್ಲಿ ರಾಜ್ಯ ಸರ್ಕಾರವು ಮಾಡಿದ ನಿಯಮಗಳು;

(ಕೆ) "ಉಗ್ರಾಣ" ಎಂದರೆ ಸರಕು ದಾಸ್ತಾನುದಾರನ ಪರವಾಗಿ ಸರಕು ದಾಸ್ತಾನು ಉದ್ದೇಶಕ್ಕಾಗಿ ಬಳಸುವ ಅಥವಾ ಬಳಸಬಹುದಾದ ಯಾವುದೇ ಕಟ್ಟಡ, ರಚನೆ ಅಥವಾ ಇತರ ಸಂರಕ್ಷಿತ ಆವರಣ; ಆದರೆ ಇದರಲ್ಲಿ ಹೋಟೆಲ್‌ಗಳಿಗೆ, ರೈಲ್ವೆ ನಿಲ್ದಾಣಗಳಿಗೆ, ಇತರ ಸಾರ್ವಜನಿಕ ವಾಹನಗಳ ಆವರಣಗಳು ಮತ್ತು ಅಂಥವುಗಳಿಗೆ ಲಗತ್ತಾಗಿರುವ ಸರಕು ಕೋಣೆಗಳು ಒಳಗೊಳ್ಳುವುದಿಲ್ಲ ಮತ್ತು "ಉಗ್ರಾಣ ವ್ಯವಸ್ಥೆ" ಎಂಬ ಪದವನ್ನು ತದನುಸಾರವಾಗಿ ಅರ್ಥೈಸತಕ್ಕದ್ದು;

(ಎಲ್) "ಉಗ್ರಾಣಪಾಲಕ" ಎಂದರೆ ತನ್ನ ಗೋದಾಮಿಗೆ ಸಂಬಂಧಿಸಿದಂತೆ ಈ ಅಧಿನಿಯಮದ ಅಡಿಯಲ್ಲಿ ಲೈಸೆನ್ಸು ಪಡೆದಿರುವ ಒಬ್ಬ ವ್ಯಕ್ತಿ.

## ಅಧ್ಯಾಯ-II

## ಉಗ್ರಾಣಗಳಿಗೆ ಲೈಸೆನ್ಸು ನೀಡುವುದು

**3. ಉಗ್ರಾಣದ ವ್ಯವಹಾರವನ್ನು ವಿನಿಯಮಿಸುವುದು.-** ಈ ಅಧಿನಿಯಮದ ಅಡಿಯಲ್ಲಿ ನೀಡಲಾದ ಲೈಸೆನ್ಸಿನ ಮೇರೆಗಲ್ಲದೆ ಮತ್ತು ಕಾಲಕಾಲಕ್ಕೆ ನಿಯಮಿಸಬಹುದಾದಂಥ ಅದರ ನಿಬಂಧನೆಗಳು ಮತ್ತು ಷರತ್ತುಗಳಿಗೆ ಅನುಸಾರವಾಗಿಯಲ್ಲದೆ ಯಾರೇ ವ್ಯಕ್ತಿಯು ಉಗ್ರಾಣದ ವ್ಯವಹಾರವನ್ನು ನಡೆಸತಕ್ಕದ್ದಲ್ಲ.

**4. ಲೈಸೆನ್ಸ್ ನೀಡಿಕೆ.-** (1) ಒಂದು ಲೈಸೆನ್ಸ್‌ಗಾಗಿ ಇರುವ ಪ್ರತಿಯೊಂದು ಅರ್ಜಿಯನ್ನು ನಿಯಮಿಸಲಾದ ನಮೂನೆಯಲ್ಲಿ ನಿಯಮಿಸಲಾದ ಪ್ರಾಧಿಕಾರಕ್ಕೆ ಸಲ್ಲಿಸತಕ್ಕದ್ದು.

(2) 5ನೇ ಪ್ರಕರಣದ ಉಪಬಂಧಗಳಿಗೊಳಪಟ್ಟು, ನಿಯಮಿಸಲಾದ ಪ್ರಾಧಿಕಾರವು ಅಂಥ ಅರ್ಜಿಯನ್ನು ಸ್ವೀಕರಿಸಿದ ತರುವಾಯ ಮತ್ತು ನಿಯಮಿಸಬಹುದಾದಂಥ ಫೀಜಿನ ಸಂದಾಯದ ತರುವಾಯ ಲೈಸೆನ್ಸನ್ನು ಮಂಜೂರು ಮಾಡಬಹುದು.

**5. ಲೈಸೆನ್ಸ್ ನೀಡುವುದಕ್ಕೆ ಷರತ್ತುಗಳು.-** (1) ಒಂದು ಲೈಸೆನ್ಸನ್ನು ನೀಡುವುದಕ್ಕೆ ಮುಂಚೆ, ನಿಯಮಿಸಲಾದ ಪ್ರಾಧಿಕಾರವು,-

(ಎ) ಲೈಸೆನ್ಸ್ ಕೋರಿ ಸಲ್ಲಿಸಲಾದ ಅರ್ಜಿಯಲ್ಲಿ ನಮೂದಿಸಿದ ಉಗ್ರಾಣವು ಸರಕುಗಳ ವರ್ಗ ಅಥವಾ ವರ್ಗಗಳನ್ನು ಯುಕ್ತವಾಗಿ ದಾಸ್ತಾನು ಮಾಡಲು ಸೂಕ್ತವಾಗಿದೆ;

(ಬಿ) ಅರ್ಜಿದಾರನು, ಅಂಥ ಉಗ್ರಾಣವನ್ನು ನಡೆಸಲು ಸಕ್ಷಮನಾಗಿದ್ದಾನೆ;

(ಸಿ) ಅರ್ಜಿದಾರನು (2) ನೇ ಉಪ ಪ್ರಕರಣದ ಅಡಿಯಲ್ಲಿ ರಾಜ್ಯಸರ್ಕಾರವು ಅಧಿಸೂಚಿಸಿದ ಇತರ ಯಾವುದೇ ಷರತ್ತನ್ನು ಪೂರೈಸಿದ್ದಾನೆ;

(ಡಿ) ಅರ್ಜಿದಾರನು ಲೈಸೆನ್ಸಿಗಾಗಿ ನಿಯಮಿಸಲಾದ ಫೀಜನ್ನು ಸಂದಾಯ ಮಾಡಿದ್ದಾನೆ ಮತ್ತು ನಿಯಮಿಸಲಾದ ಭದ್ರತೆ ಯಾವುದಾದರೂ ಇದ್ದರೆ, ಅದನ್ನು ಸಹ ಒದಗಿಸಿದ್ದಾನೆ:

ಪರಂತು, ಅರ್ಜಿದಾರನು ಕೃಷಿ ಉತ್ಪನ್ನ (ಅಭಿವೃದ್ಧಿ ಮತ್ತು ಉಗ್ರಾಣ ವ್ಯವಸ್ಥೆ) ನಿಗಮಗಳ ಅಧಿನಿಯಮ, 1956ರ ಅಡಿಯಲ್ಲಿ ಸ್ಥಾಪಿತವಾದ ಒಂದು ನಿಗಮವಾಗಿರುವಲ್ಲಿ, ಯಾವುದೇ ಭದ್ರತೆ ಒದಗಿಸುವ ಅಗತ್ಯವಿರತಕ್ಕದ್ದಲ್ಲ;

(ಇ) ನಿಯಮಿಸಲಾದ ಪ್ರಾಧಿಕಾರದ ಅಭಿಪ್ರಾಯದಲ್ಲಿ ಲೈಸೆನ್ಸಿಗಾಗಿ ಅರ್ಜಿ ಸಲ್ಲಿಸಿದ ಅರ್ಜಿದಾರನನ್ನು ಅನರ್ಹನೆಂದು ಭಾವಿಸಲು ಇತರ ಯಾವುದೇ ಕಾರಣವಿಲ್ಲ

- ಎಂಬುದನ್ನು ಮನವರಿಕೆ ಮಾಡಿಕೊಳ್ಳತಕ್ಕದ್ದು.

(2) ಈ ಪ್ರಕರಣದ ಅಡಿಯಲ್ಲಿ ಉಗ್ರಾಣಪಾಲಕನಿಗೆ ಯಾವ ಷರತ್ತುಗಳ ಅಡಿಯಲ್ಲಿ ಲೈಸೆನ್ಸ್ ನೀಡಲಾಗಿದೆಯೋ ಆ ಷರತ್ತುಗಳಿಗೆ ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ ಸೇರ್ಪಡೆ ಮಾಡಬಹುದು ಅಥವಾ ಅವುಗಳನ್ನು ಬದಲಾಯಿಸಬಹುದು.

**6. ಲೈಸೆನ್ಸಿನ ಅವಧಿ ಮತ್ತು ನವೀಕರಣ.-** 4ನೇ ಪ್ರಕರಣದ ಅಡಿಯಲ್ಲಿ ನೀಡಲಾದ ಪ್ರತಿಯೊಂದು ಲೈಸೆನ್ಸು, ನಿಯಮಿಸಲಾದ ಅವಧಿಯವರೆಗೆ ಮಾನ್ಯವಾಗಿರತಕ್ಕದ್ದು ಮತ್ತು ಅರ್ಜಿ ಸಲ್ಲಿಸಿದ ಮೇಲೆ ಮತ್ತು ನಿಯಮಿಸಲಾದ ಫೀಜನ್ನು ಸಂದಾಯ ಮಾಡಿದ ಮೇಲೆ, ನಿಯಮಿಸಲಾದ ಪ್ರಾಧಿಕಾರವು ಅದನ್ನು ಕಾಲಕಾಲಕ್ಕೆ ಮತ್ತು ನಿಯಮಿಸಿದ ಅವಧಿಗೆ ನವೀಕರಿಸಬಹುದು, ಆದರೆ 5ನೇ ಪ್ರಕರಣದಲ್ಲಿ ಉಲ್ಲೇಖಿಸಲಾದ ಇತರ ಷರತ್ತುಗಳ ಪಾಲನೆಯು ಮುಂದುವರೆಯತಕ್ಕದ್ದು.

**7. ಲೈಸೆನ್ಸ್ ನೀಡಿಕೆ ಅಥವಾ ನವೀಕರಣೆಯ ಬಗ್ಗೆ ನೋಟೀಸು.-** ನಿಯಮಿಸಲಾದ ಪ್ರಾಧಿಕಾರವು, 4 ನೇ ಅಥವಾ 6 ನೇ ಪ್ರಕರಣದ ಅಡಿಯಲ್ಲಿ ಲೈಸೆನ್ಸನ್ನು ಮಾಡಲು ಅಥವಾ ನವೀಕರಿಸಲು ನಿರಾಕರಿಸಿದರೆ, ಅದು ಅಂಥ ನಿರಾಕರಣೆಗೆ ಕಾರಣಗಳನ್ನು ಲಿಖಿತದಲ್ಲಿ ದಾಖಲು ಮಾಡತಕ್ಕದ್ದು ಮತ್ತು ತನ್ನ ಆದೇಶದ ಒಂದು ಪ್ರತಿಯನ್ನು ಅರ್ಜಿದಾರನಿಗೆ ಕಳುಹಿಸತಕ್ಕದ್ದು.

**8. ಲೈಸೆನ್ಸ್‌ನ ತಡೆಹಿಡಿಯುವಿಕೆ ಮತ್ತು ರದ್ದಿಯಾತಿ.-** (1) ಲೈಸೆನ್ಸುದಾರನು,-

(ಎ) ತಾನು ದಿವಾಳಿಯೆಂದು ನ್ಯಾಯನಿರ್ಣೀತನಾಗಲು ಅರ್ಜಿ ಸಲ್ಲಿಸಿದ್ದಾನೆ ಅಥವಾ ಹಾಗೆ ನ್ಯಾಯ ನಿರ್ಣೀತನಾಗಿದ್ದಾನೆ; ಅಥವಾ

(ಬಿ) ಉಗ್ರಾಣದ ಮೇಲೆ ತನ್ನ ನಿಯಂತ್ರಣವನ್ನು ಪೂರ್ಣವಾಗಿ ಅಥವಾ ಭಾಗಶಃ ಬಿಟ್ಟುಕೊಟ್ಟಿದ್ದರೆ; ಅಥವಾ

(ಸಿ) ಅಂಥ ಉಗ್ರಾಣ ನಡೆಸುವುದನ್ನು ನಿಲ್ಲಿಸಿದ್ದಾನೆ; ಅಥವಾ

(ಡಿ) ತಾನು ಸಲ್ಲಿಸಿದ ಸೇವೆಗಳ ಬಗ್ಗೆ ಅನುಚಿತ ವೆಚ್ಚಗಳನ್ನು ವಿಧಿಸಿದ್ದಾನೆ; ಅಥವಾ

(ಇ) ಅಂಥ ಉಗ್ರಾಣವನ್ನು ನಡೆಸಲು ಇತರ ಯಾವುದೇ ರೀತಿಯಲ್ಲಿ ಅಸಮರ್ಥನಾಗಿದ್ದಾನೆ; ಅಥವಾ

(ಎಫ್) ಲೈಸೆನ್ಸಿನ ಯಾವುವೇ ನಿಬಂಧನೆಗಳನ್ನು ಅಥವಾ ಈ ಅಧಿನಿಯಮದ ಅಥವಾ ನಿಯಮಗಳ ಯಾವುವೇ ಉಪಬಂಧಗಳನ್ನು ಉಲ್ಲಂಘಿಸಿದ್ದಾನೆ ಅಥವಾ ಪಾಲಿಸಲು ವಿಫಲನಾಗಿದ್ದಾನೆ

- ಎಂದು ನಿಯಮಿಸಲಾದ ಪ್ರಾಧಿಕಾರವು ಅಭಿಪ್ರಾಯಪಟ್ಟರೆ, 4ನೇ ಪ್ರಕರಣದ ಅಡಿಯಲ್ಲಿ ನೀಡಿದ ಅಥವಾ 6 ನೇ ಪ್ರಕರಣದ ಅಡಿಯಲ್ಲಿ ನವೀಕರಿಸಿದ ಪ್ರತಿಯೊಂದು ಲೈಸೆನ್ಸು ಲಿಖಿತದಲ್ಲಿ ದಾಖಲು ಮಾಡಬೇಕಾದ ಕಾರಣಗಳಿಗಾಗಿ, ಅವರಿಂದ ತಾತ್ಕಾಲಿಕವಾಗಿಯಾಗಲಿ ಅಥವಾ ಖಾಯಂ ಆಗಿಯಾಗಲಿ ತಡೆಹಿಯುವಿಕೆಗೆ ಅಥವಾ ರದ್ದಿಯಾತಿಗೆ ಬದ್ಧವಾಗಿರತಕ್ಕದ್ದು.

(2) ಒಂದು ಲೈಸೆನ್ಸನ್ನು ತಡೆಹಿಡಿದರೆ ಅಥವಾ ರದ್ದುಗೊಳಿಸಿದರೆ, ನಿಯಮಿಸಲಾದ ಪ್ರಾಧಿಕಾರವು ಆ ಬಗ್ಗೆ ಲೈಸೆನ್ಸಿನಲ್ಲಿ ನಮೂದು ಮಾಡತಕ್ಕದ್ದು.

**9. ಲೈಸೆನ್ಸನ್ನು ತಡೆಹಿಡಿಯಲು ಅಥವಾ ರದ್ದುಗೊಳಿಸಲು ನೋಟೀಸು.-** (1) 8ನೇ ಪ್ರಕರಣದ ಅಡಿಯಲ್ಲಿ ಒಂದು ಆದೇಶವನ್ನು ಹೊರಡಿಸುವ ಮುಂಚೆ, ನಿಯಮಿಸಲಾದ ಪ್ರಾಧಿಕಾರವು, ಯಾವ ಕಾರಣದ ಮೇಲೆ ಉಗ್ರಾಣಪಾಲಕನ ಲೈಸೆನ್ಸನ್ನು ತಡೆಹಿಡಿಯಲು ಅಥವಾ ರದ್ದುಗೊಳಿಸಲು ಉದ್ದೇಶಿಸಲಾಗಿದೆ ಎಂಬುದನ್ನು ಅವನಿಗೆ ತಿಳಿಸಿ, ನೋಟೀಸನ್ನು ನೀಡತಕ್ಕದ್ದು ಮತ್ತು ಅದರ ವಿರುದ್ಧ ಕಾರಣವನ್ನು ತೋರಿಸಲು ಅವನಿಗೆ ಒಂದು ಯುಕ್ತ ಅವಕಾಶವನ್ನು ಕೊಡತಕ್ಕದ್ದು.

(2) ಉಗ್ರಾಣಪಾಲಕನು ಯಾವುವಾದರೂ ವಿವರಗಳನ್ನು ನೀಡಿದರೆ, ಅವುಗಳನ್ನು ಪರಿಶೀಲಿಸಿದ ತರುವಾಯ, ನಿಯಮಿಸಲಾದ ಪ್ರಾಧಿಕಾರವು ತಾನು ನ್ಯಾಯೋಚಿತವೆಂದು ಭಾವಿಸುವಂಥ ಆದೇಶಗಳನ್ನು ಮಾಡಬಹುದು.

**10. ಲೈಸೆನ್ಸನ್ನು ಹಿಂದಿರುಗಿಸುವುದು.-** ಒಂದು ಲೈಸೆನ್ಸಿನ ಅವಧಿಯು ಮುಕ್ತಾಯವಾದಾಗ ಅಥವಾ ಅದನ್ನು ತಡೆಹಿಡಿದಾಗ ಅಥವಾ ರದ್ದುಗೊಳಿಸಿದಾಗ, ಉಗ್ರಾಣಪಾಲಕನು ಹಾಗೆ ಉಗ್ರಾಣಪಾಲಕನಾಗಿ ಕಾರ್ಯ ನಿರ್ವಹಿಸುವುದನ್ನು ನಿಲ್ಲಿಸತಕ್ಕದ್ದು ಮತ್ತು ನಿಯಮಿಸಲಾದ ಪ್ರಾಧಿಕಾರಕ್ಕೆ ಲೈಸೆನ್ಸನ್ನು ಹಿಂದಿರುಗಿಸತಕ್ಕದ್ದು ಮತ್ತು ಪ್ರಾಧಿಕಾರವು ಉಗ್ರಾಣಪಾಲಕನು ತನ್ನ ವ್ಯವಹಾರವನ್ನು ಸಮಾಪನಗೊಳಿಸಲು ಸಾಧ್ಯವಾಗುವಂತೆ ಅವನಿಗೆ ಯುಕ್ತ ಕಾಲಾವಕಾಶವನ್ನು ಕೊಡತಕ್ಕದ್ದು.

**11. ಲೈಸೆನ್ಸಿನ ದ್ವಿಪ್ರತಿ.-** (1) ಉಗ್ರಾಣಪಾಲಕನಿಗೆ ನೀಡಿದ ಲೈಸೆನ್ಸ್ ಕಳೆದುಹೋಗಿರುವಲ್ಲಿ, ಹಾಳಾಗಿರುವಲ್ಲಿ, ಹರಿದುಹೋಗಿರುವಲ್ಲಿ, ವಿರೂಪಗೊಂಡಿರುವಲ್ಲಿ ಅಥವಾ ಅನ್ಯಥಾ ಓದಲಾಗದಂತಾಗಿರುವಲ್ಲಿ, ನಿಯಮಿಸಲಾದ ಪ್ರಾಧಿಕಾರವು, ಉಗ್ರಾಣಪಾಲಕನು ನೀಡಿದ ಅರ್ಜಿಯ ಮೇಲೆ ಮತ್ತು ನಿಯಮಿಸಲಾದ ಫೀಜನ್ನು ಸಂದಾಯ ಮಾಡಿದ ಮೇಲೆ ಲೈಸೆನ್ಸಿನ ಒಂದು ದ್ವಿಪ್ರತಿಯನ್ನು ನೀಡತಕ್ಕದ್ದು.

(2) ಒಂದು ಲೈಸೆನ್ಸಿನ ದ್ವಿಪ್ರತಿಯನ್ನು ನೀಡುವಾಗ ಅದಕ್ಕೆ "ದ್ವಿಪ್ರತಿ" ಎಂದು ಸ್ಪಷ್ಟವಾಗಿ ಮುದ್ರೆಯೊತ್ತತಕ್ಕದ್ದು. ದ್ವಿಪ್ರತಿಯನ್ನು ನೀಡಿದ ದಿನಾಂಕವನ್ನು ಮತ್ತು ಮೂಲ ಲೈಸೆನ್ಸನ್ನು ನೀಡಿದ ದಿನಾಂಕವನ್ನು ಲೈಸೆನ್ಸ್ ನೀಡುವ ಕಚೇರಿಯ ದಾಖಲೆಯಿಂದ ಪಡೆದು, ಅದರಲ್ಲಿ ಗುರುತು ಮಾಡತಕ್ಕದ್ದು.

## ಅಧ್ಯಾಯ-III

## ಉಗ್ರಾಣಪಾಲಕನ ಕರ್ತವ್ಯಗಳು

**12. ದಾಸ್ತಾನು ಇಟ್ಟಿರುವ ಸರಕುಗಳ ಬಗ್ಗೆ ವಹಿಸಬೇಕಾದ ಯುಕ್ತ ಜಾಗರೂಕತೆ.-** ಪ್ರತಿಯೊಬ್ಬ ಉಗ್ರಾಣಪಾಲಕನು ತನ್ನಲ್ಲಿ ದಾಸ್ತಾನು ಇಟ್ಟಿರುವ ಸರಕುಗಳ ಬಗ್ಗೆ ಸಾಮಾನ್ಯ ವಿವೇಚನೆಯುಳ್ಳ ಒಬ್ಬ ವ್ಯಕ್ತಿಯು ಅಂಥಹದೇ ಸಂದರ್ಭಗಳು ಮತ್ತು ಪರಿಸ್ಥಿತಿಗಳಲ್ಲಿ, ತನ್ನ ಸ್ವಂತ ಸರಕುಗಳ ಬಗ್ಗೆ ವಹಿಸುವಂಥ ಜಾಗರೂಕತೆಯನ್ನೇ ವಹಿಸತಕ್ಕದ್ದು.

**13. ಸರಕುಗಳ ಹಾನಿ ಅಥವಾ ಕ್ಷತಿಯ ವಿರುದ್ಧ ಮುನ್ನೆಚ್ಚರಿಕೆಗಳು.-** (1) ಪ್ರತಿಯೊಬ್ಬ ಉಗ್ರಾಣಪಾಲಕನು, ತನ್ನ ಉಗ್ರಾಣವನ್ನು ಸ್ವಚ್ಛವಾಗಿ ಮತ್ತು ತೇವದಿಂದ ಮುಕ್ತವಾಗಿ ಇಡತಕ್ಕದ್ದು. ಇಲಿಗಳು ಮತ್ತು ಇತರ ಕೀಟಗಳ ಬಗ್ಗೆ ಎಲ್ಲ ಅವಶ್ಯಕ ಮುನ್ನೆಚ್ಚರಿಕೆ ತೆಗೆದುಕೊಳ್ಳತಕ್ಕದ್ದು ಮತ್ತು ನಿಯಮಿಸಬಹುದಾದಂಥ ಇತರ ಷರತ್ತುಗಳನ್ನು ಪೂರೈಸತಕ್ಕದ್ದು.

(2) ಯಾರೇ ಉಗ್ರಾಣಪಾಲಕನು, ಉಗ್ರಾಣದಲ್ಲಿ ಇಟ್ಟಿರುವ ಅಥವಾ ಇಡಬಹುದಾದ ಇತರ ಸರಕುಗಳಿಗೆ ಹಾನಿ ಉಂಟು ಮಾಡುವ ಸಂಭವವಿರುವಂಥ ಸರಕುಗಳನ್ನು ಇಟ್ಟುಕೊಳ್ಳುವ ಸಲುವಾಗಿ ಸ್ವೀಕರಿಸತಕ್ಕದ್ದಲ್ಲ.

**14. ಸರಕುಗಳ ಗುರುತಿನ ಪರಿರಕ್ಷಣೆ.-** ಪ್ರತಿಯೊಬ್ಬ ಉಗ್ರಾಣಪಾಲಕನು, ಒಬ್ಬ ಸರಕು ದಾಸ್ತಾನುದಾರ ಇಟ್ಟಿರುವ ಸರಕುಗಳನ್ನು ಇತರ ಸರಕು ದಾಸ್ತಾನುದಾರ ಇಟ್ಟಿರುವ ಸರಕುಗಳಿಂದ ಮತ್ತು ಪ್ರತ್ಯೇಕ ರಸೀದಿ ನೀಡಿರುವ ಅದೇ ಸರಕು ದಾಸ್ತಾನುದಾರನ ಇತರ ಸರಕುಗಳನ್ನು, ಎಲ್ಲ ಸಮಯದಲ್ಲಿ ಗುರುತಿಸಲು ಮತ್ತು ರವಾನಿಸಲು ಅನುಕೂಲವಾಗುವಂಥ ಒಂದು ವಿಧಾನದಲ್ಲಿ ಪ್ರತ್ಯೇಕವಾಗಿ ಇಡತಕ್ಕದ್ದು:

ಪರಂತು, ಉಗ್ರಾಣದಲ್ಲಿ ಗುಣಮಟ್ಟಕ್ಕನುಸಾರವಾದ ಮತ್ತು ವರ್ಗೀಕರಿಸಲಾದ ಸರಕುಗಳನ್ನು ದಾಸ್ತಾನು ಮಾಡಿದಲ್ಲಿ, ಉಗ್ರಾಣಪಾಲಕ ಮತ್ತು ಸರಕು ದಾಸ್ತಾನುದಾರನ ನಡುವೆ ಆದ ಯಾವುದೇ ಕರಾರಿಗೆ ಒಳಪಟ್ಟು, ಇತರ ಸರಕು ದಾಸ್ತಾನುದಾರರಿಗೆ ಸೇರಿದ ಒಂದೇ ರೀತಿಯ ವಿವಿಧ ಸರಕುಗಳನ್ನು ಒಟ್ಟಿಗೆ ಶೇಖರಿಸಿ ಇಡಬಹುದು ಮತ್ತು ಪ್ರತಿಯೊಬ್ಬ ಸರಕು ದಾಸ್ತಾನುದಾರನು, ಅವನ ರಸೀದಿಯಲ್ಲಿ ತೋರಿಸಿರುವಂತೆ, ಸರಕುಗಳ ತೂಕ ಅಥವಾ ಸಂದರ್ಭಾನುಸಾರ, ಪ್ರಮಾಣಕ್ಕನುಸಾರವಾಗಿ ತನ್ನ ಭಾಗದ ಸರಕುಗಳಿಗೆ ಮಾತ್ರ ಹಕ್ಕುಳ್ಳವನಾಗಿರತಕ್ಕದ್ದು.

**15. ಉಗ್ರಾಣದಲ್ಲಿ ಸರಕುಗಳು ಕೆಡುತ್ತಹೋಗುವುದು ಮತ್ತು ಅವುಗಳ ವಿಲೇವಾರಿ.-** (1) ಉಗ್ರಾಣದಲ್ಲಿ ಶೇಖರಿಸಿಡಲಾದ ಸರಕುಗಳು, ಉಗ್ರಾಣಪಾಲಕನ ನಿಯಂತ್ರಣವನ್ನು ಮೀರಿದ ಕಾರಣಗಳಿಂದಾಗಿ ಕೆಡುತ್ತ ಹೋದಾಗಲೆಲ್ಲ ಅವನು ಕೂಡಲೇ ಸರಕು ದಾಸ್ತಾನುದಾರನಿಗೆ ಹಾಗೆ ದುಸ್ಥಿತಿಗಿಳಿದಿರುವ ಬಗ್ಗೆ ಮತ್ತು ಯುಕ್ತ ರಸೀದಿಯನ್ನು ಕೊಟ್ಟ ಮೇಲೆ ಮತ್ತು ಉಗ್ರಾಣಪಾಲಕನಿಗೆ ಸಂದಾಯ ಮಾಡಬೇಕಾದ ಎಲ್ಲ ವೆಚ್ಚಗಳನ್ನು ಸಂದಾಯ ಮಾಡಿದ ನಂತರ ಸರಕುಗಳನ್ನು ಕೂಡಲೇ ವಶಕ್ಕೆ ತೆಗೆದುಕೊಳ್ಳುವಂತೆ ಅವನಿಗೆ ಅಗತ್ಯಪಡಿಸಿ ನೋಟೀಸು ಕೊಡತಕ್ಕದ್ದು.

(2) ಸರಕು ದಾಸ್ತಾನುದಾರನು ಸಕಾಲದಲ್ಲಿ (1) ನೇ ಉಪ ಪ್ರಕರಣದ ಅಡಿಯಲ್ಲಿ ತನಗೆ ನೀಡಲಾದ ಒಂದು ನೋಟೀಸನ್ನು ಪಾಲಿಸದಿದ್ದರೆ, ಉಗ್ರಾಣಪಾಲಕನು ಸರಕುಗಳನ್ನು ಉಗ್ರಾಣದಿಂದ ತೆಗೆಸತಕ್ಕದ್ದು ಮತ್ತು ಸರಕು ದಾಸ್ತಾನುದಾರನ ಖರ್ಚಿನಲ್ಲಿ ಮತ್ತು ಹೊಣೆಯಲ್ಲಿ ಅವುಗಳನ್ನು ಬಹಿರಂಗ ಹರಾಜಿನ ಮೂಲಕ ಮಾರಾಟ ಮಾಡುವಂತೆ ಮಾಡತಕ್ಕದ್ದು.

(3) ಉಗ್ರಾಣದಲ್ಲಿ ದಾಸ್ತಾನು ಇಡಲಾದ ಯಾವುವೇ ಸರಕುಗಳ ಬಗ್ಗೆ ಅಥವಾ ಅಂಥ ಸರಕುಗಳ ಸ್ವೀಕೃತಿಯ ಬಗ್ಗೆ ಹಿತಾಸಕ್ತಿ ಹೊಂದಿರುವ ಯಾರೇ ವ್ಯಕ್ತಿಯು, ಆ ವಿಷಯದ ಬಗ್ಗೆ ಮತ್ತು ಹಿತಾಸಕ್ತಿಯ ಸ್ವರೂಪದ ಬಗ್ಗೆ ಲಿಖಿತದಲ್ಲಿ ಉಗ್ರಾಣಪಾಲಕನಿಗೆ ತಿಳಿಸತಕ್ಕದ್ದು ಮತ್ತು ಉಗ್ರಾಣಪಾಲಕನು ಆ ಬಗ್ಗೆ ದಾಖಲು ಮಾಡಿಕೊಳ್ಳತಕ್ಕದ್ದು ಮತ್ತು ಅಂಥ ವ್ಯಕ್ತಿಯು ಸರಕುಗಳ ಸ್ಥಿತಿಯ ಬಗ್ಗೆ ತನಗೆ ಮಾಹಿತಿ ನೀಡಬೇಕೆಂದು ಲಿಖಿತದಲ್ಲಿ ಕೋರಿದರೆ ಮತ್ತು ಅಂಥ ಮಾಹಿತಿ ನೀಡುವುದಕ್ಕಾಗಿ ಇರುವ ಚಾರ್ಜ್‌ಗಳನ್ನು ಸಂದಾಯ ಮಾಡಲು ಒಪ್ಪಿದರೆ, ಉಗ್ರಾಣ ಪಾಲಕನು ತದನುಸಾರವಾಗಿ ಅವನಿಗೆ ಮಾಹಿತಿ ನೀಡತಕ್ಕದ್ದು.

**16. ಸರಕುಗಳನ್ನು ಒಪ್ಪಿಸುವುದು.-** (1) ಪ್ರತಿಯೊಬ್ಬ ಉಗ್ರಾಣಪಾಲಕನು, ಯುಕ್ತ ಕಾರಣವಿಲ್ಲದೆ, ಯಾವುದೇ ಅನಗತ್ಯ ವಿಳಂಬ ಮಾಡದೆ, ತನ್ನ ಉಗ್ರಾಣದಲ್ಲಿಡಲಾದ ಸರಕುಗಳನ್ನು ಸರಕು ದಾಸ್ತಾನುದಾರನ ಕೋರಿಕೆಯ ಮೇಲೆ, ಸರಕುಗಳು ಹಾಳಾಗದಂತೆ ಮತ್ತು ಕ್ರಮಬದ್ಧವಾಗಿ ನಿರ್ವಹಿಸಿದ ರಸೀದಿಯನ್ನು ಹಿಂದಿರುಗಿಸಿದ ಮೇಲೆ ಮತ್ತು ಬಾಕಿ ಇರುವ ಎಲ್ಲ ವೆಚ್ಚಗಳನ್ನು ಉಗ್ರಾಣಪಾಲಕನಿಗೆ ಸಂದಾಯ ಮಾಡಿದ ಮೇಲೆ ಒಪ್ಪಿಸತಕ್ಕದ್ದು.

**ವಿವರಣೆ:-** ಉಗ್ರಾಣಪಾಲಕನ ನಿಯಂತ್ರಣವನ್ನು ಮೀರಿದ ಕಾರಣಗಳಿಂದ ಸರಕುಗಳು ಕೆಡುತ್ತಾ ಹೋಗುವ ಸ್ಥಿತಿಯನ್ನು ಈ ಉಪಪ್ರಕರಣದ ಉದ್ದೇಶಗಳಿಗಾಗಿ, ಕೆಡುತ್ತಾಹೋಗುವ ಸ್ಥಿತಿಯೆಂದು ಪರಿಗಣಿಸತಕ್ಕದ್ದಲ್ಲ.

(2) ಉಗ್ರಾಣ ಪಾಲಕ ಮತ್ತು ಸರಕು ದಾಸ್ತಾನುದಾರನ ನಡುವಿನ ಯಾವುದೇ ಒಪ್ಪಂದಕ್ಕೆ ಒಳಪಟ್ಟು, ಸರಕು ದಾಸ್ತಾನುದಾರನು ಉಗ್ರಾಣದಲ್ಲಿಡಲಾದ ಸರಕುಗಳನ್ನು ಭಾಗಶಃ ಹಿಂದಕ್ಕೆ ಪಡೆಯಬಹುದು.

**17. ದಾಸ್ತಾನು ಮಾಡಲಾದ ಸರಕುಗಳ ಕೊರತೆ ಅಥವಾ ಹೆಚ್ಚಳಕ್ಕೆ ಸಂಬಂಧಿಸಿದಂತೆ ಉಗ್ರಾಣಪಾಲಕನ ಹೊಣೆಗಾರಿಕೆ.-** (1) ತೇವಾಂಶ ಹೀರಿಕೊಂಡ ಅಥವಾ ಉಗ್ರಾಣಪಾಲಕನ ನಿಯಂತ್ರಣವನ್ನು ಮೀರಿದ ಇತರ ಕಾರಣಗಳಿಂದಾಗಿ ಉಗ್ರಾಣದಲ್ಲಿ ದಾಸ್ತಾನು ಮಾಡಲಾದ ಸರಕುಗಳಲ್ಲಿ ಯಾವುದೇ ಹೆಚ್ಚಳ ಉಂಟಾದರೆ ಅದಕ್ಕೆ ಉಗ್ರಾಣಪಾಲಕನು ಹೊಣೆಗಾರನಾಗಿರತಕ್ಕದ್ದಲ್ಲ.

(2) ಒಣಗಿದ್ದರಿಂದ ಅಥವಾ ಉಗ್ರಾಣಪಾಲಕನ ನಿಯಂತ್ರಣವನ್ನು ಮೀರಿದ ಇತರ ಕಾರಣಗಳಿಂದ ಉಗ್ರಾಣದಲ್ಲಿ ದಾಸ್ತಾನು ಮಾಡಲಾದ ಸರಕುಗಳ ಮೇಲೆ ಯಾವುದೇ ಕೊರತೆ ಉಂಟಾದರೆ ಉಗ್ರಾಣಪಾಲಕನು ಅದಕ್ಕೆ ಜವಾಬ್ದಾರನಾಗಿರತಕ್ಕದ್ದಲ್ಲ.

(3) ಅಂಥ ಕೊರತೆ ಅಥವಾ ಹೆಚ್ಚಳವು ಒಣಗುವಿಕೆಯ ಅಥವಾ ತೇವಾಂಶದ ಹೀರಿಕೆಯ ಕಾರಣದಿಂದಾಗಿ ಆದುದೇ ಅಥವಾ ಉಗ್ರಾಣಪಾಲಕನ ನಿಯಂತ್ರಣಕ್ಕೆ ಮೀರಿದ ಇತರ ಕಾರಣಗಳಿಂದಾಗಿ ಆದುದೇ ಎಂಬ ಬಗ್ಗೆ ವಿವಾದ ಉಂಟಾದ ಸಂದರ್ಭದಲ್ಲಿ, ವಿಷಯವನ್ನು ನಿಯಮಿಸಬಹುದಾದಂಥ ರೀತಿಯಲ್ಲಿ ಮತ್ತು ಅಂಥ ಕಾಲದೊಳಗೆ, 29 ನೇ ಪ್ರಕರಣದಲ್ಲಿ ಉಲ್ಲೇಖಿಸಲಾದ ಅಪೀಲು ಪ್ರಾಧಿಕಾರಕ್ಕೆ ಒಪ್ಪಿಸತಕ್ಕದ್ದು, ಆ ಬಗ್ಗೆ ಅದರ ತೀರ್ಮಾನವು ಅಂತಿಮವಾಗಿರತಕ್ಕದ್ದು ಮತ್ತು ಬಂಧಕವಾಗಿರತಕ್ಕದ್ದು.

**18. ಉಗ್ರಾಣದಲ್ಲಿನ ಸರಕುಗಳ ವಿಮೆ.-** (1) ಪ್ರತಿಯೊಬ್ಬ ಉಗ್ರಾಣಪಾಲಕನು, ತನ್ನ ಉಗ್ರಾಣದಲ್ಲಿ ದಾಸ್ತಾನು ಇಡಲಾದ ಸರಕುಗಳ ಸಂಬಂಧದಲ್ಲಿ ನಿಯಮಗಳ ಮೂಲಕ ನಿಯಮಿಸಬಹುದಾದ ಅಂಥ ಘಟನೆಗಳ ವಿರುದ್ಧ ಅಂಥ ವಿಧಾನದಲ್ಲಿ ವಿಮೆ ಮಾಡಿಸತಕ್ಕದ್ದು ಮತ್ತು ಅಂಥ ನಿಯಮಗಳು ಕೆಲವು ಘಟನೆಗಳ ವಿರುದ್ಧ ವಿಮೆಯು ಐಚ್ಛಿಕವಾಗಿರತಕ್ಕದ್ದೆಂದು ಉಪಬಂಧಿಸಬಹುದು:

ಪರಂತು, ಈ ಪ್ರಕರಣದಲ್ಲಿರುವುದು ಯಾವುದೂ, ಕೃಷಿ ಉತ್ಪನ್ನ (ಅಭಿವೃದ್ಧಿ ಮತ್ತು ಉಗ್ರಾಣ ವ್ಯವಸ್ಥೆ) ನಿಗಮಗಳ ಅಧಿನಿಯಮ, 1956ರ (1956ರ ಕೇಂದ್ರಾಧಿನಿಯಮ 28) ಅಡಿಯಲ್ಲಿ ಸ್ಥಾಪಿತವಾದ ಒಂದು ನಿಗಮಕ್ಕೆ ಸೇರಿದ ಉಗ್ರಾಣದಲ್ಲಿ ದಾಸ್ತಾನು ಇಡಲಾದ ಯಾವ ಸರಕುಗಳ ಸಂಬಂಧದಲ್ಲಿ ನಿಯಮಿಸಲಾದ ಘಟನೆಗಳಿಂದ ಉಂಟಾಗುವ ನಷ್ಟ ಅಥವಾ ಹಾನಿಯ ವಿರುದ್ಧವಾಗಿ ನಿಯಮಿಸಿದ ವಿಧಾನದಲ್ಲಿ ಸರಕು ದಾಸ್ತಾನುದಾರನಿಗೆ ಪರಿಹಾರ ನೀಡಲು ಅಂಥ ನಿಗಮವು ಒಪ್ಪಿರುತ್ತದೆಯೋ ಆ ಸರಕುಗಳಿಗೆ ಅನ್ವಯವಾಗತಕ್ಕದ್ದಲ್ಲ.

(2) ಪ್ರತಿಯೊಬ್ಬ ಉಗ್ರಾಣಪಾಲಕನು, ಸರಕುಗಳನ್ನು ಒಪ್ಪಿಸುವುದಕ್ಕೆ ಮುಂಚೆ, ಸರಕುಗಳ ದಾಸ್ತಾನುದಾರನ ಸರಕುಗಳಿಗೆ ಸಂಬಂಧಿಸಿದಂತೆ, ವಿಮೆಯು ನಿರ್ಬಂಧಕವಾಗಿದ್ದರೆ, ನಿಯಮಿಸಲಾದ ದರದಲ್ಲಿ ಅಥವಾ ವಿಮೆಯು ಐಚ್ಛಿಕವಾಗಿದ್ದರೆ ಅಂಗೀಕರಿಸಲಾದ ದರದಲ್ಲಿ ಚಾರ್ಜ್‌ಗಳನ್ನು ಸರಕುಗಳ ದಾಸ್ತಾನುದಾರನಿಂದ ವಸೂಲು ಮಾಡಲು ಹಕ್ಕುಳ್ಳವನಾಗಿರತಕ್ಕದ್ದು ಹಾಗೂ ಉಗ್ರಾಣದಾರನು ಅಂಥ ಚಾರ್ಜ್‌ಗಳಿಗೆ ಸಂಬಂಧಿಸಿದಂತೆ ಸದರಿ ಸರಕುಗಳ ಮೇಲೆ ಒಂದು ಧಾರಣಾಧಿಕಾರವನ್ನು ಹೊಂದಿರತಕ್ಕದ್ದು.

**19. ತಾರತಮ್ಯ ನಿಷೇಧ.–** ಯಾರೇ ಉಗ್ರಾಣಪಾಲಕನು ತನ್ನ ವ್ಯವಹಾರ ನಿರ್ವಹಣೆಯಲ್ಲಿ, ತನ್ನ ಉಗ್ರಾಣದ ಸೌಲಭ್ಯಗಳನ್ನು ಉಪಯೋಗಿಸಲು ಇಚ್ಛಿಸುವ ವ್ಯಕ್ತಿಗಳ ನಡುವೆ ತಾರತಮ್ಯ ಮಾಡತಕ್ಕದ್ದಲ್ಲ:

ಪರಂತು, ಉಗ್ರಾಣಪಾಲಕನು, ರಾಜ್ಯದಲ್ಲಿರುವ ಸಹಕಾರ ಸಂಘಗಳಿಗೆ ನಿಯಮಿಸಬಹುದಾದ ಅಂಥ ಆದ್ಯತೆಯನ್ನು ನೀಡತಕ್ಕದ್ದು ಮತ್ತು ಅಂಥ ರಿಯಾಯಿತಿ ದರಗಳನ್ನು ಅವುಗಳಿಗೆ ಅನುಮತಿಸತಕ್ಕದ್ದು.

**20. ಉಗ್ರಾಣಪಾಲಕನು ಉಗ್ರಾಣದಲ್ಲಿನ ಸರಕುಗಳ ವ್ಯವಹಾರ ಮಾಡದಿರುವುದು ಅಥವಾ ಅವುಗಳಿಗೆ ಪ್ರತಿಯಾಗಿ ಸಾಲ ನೀಡದಿರುವುದು.–** ಇತರ ಯಾವುದೇ ಕಾನೂನಿನಲ್ಲಿ ಏನೇ ಒಳಗೊಂಡಿದ್ದರೂ, ಒಂದು ಸಹಕಾರ ಸಂಘವಲ್ಲದ ಯಾರೇ ಉಗ್ರಾಣಪಾಲಕನು, ತನ್ನ ಸ್ವಂತಕ್ಕಾಗಲಿ ಅಥವಾ ಇತರರಿಗಾಗಲಿ, ತನ್ನ ಉಗ್ರಾಣದಲ್ಲಿ ದಾಸ್ತಾನು ಇಡಲಾದ ಸರಕುಗಳ ವ್ಯವಹಾರ ನಡೆಸತಕ್ಕದ್ದಲ್ಲ ಅಥವಾ ತಾನು ಸ್ವೀಕರಿಸಿದ ಸರಕುಗಳ ಮೇಲೆ ಹಣವನ್ನು ಸಾಲ ಕೊಡತಕ್ಕದ್ದಲ್ಲ.

**21. ಉಗ್ರಾಣಪಾಲಕನು ನಿರ್ವಹಿಸಬೇಕಾದ ಲೆಕ್ಕ ಪತ್ರಗಳು ಮತ್ತು ಪುಸ್ತಕಗಳು.–** ಒಬ್ಬ ಉಗ್ರಾಣಪಾಲಕನು, ನಿಯಮಿಸಬಹುದಾದಂಥ ನಮೂನೆ ಮತ್ತು ವಿಧಾನದಲ್ಲಿ ಲೆಕ್ಕಪತ್ರಗಳನ್ನು, ಪುಸ್ತಕಗಳನ್ನು ಮತ್ತು ದಾಖಲೆಗಳನ್ನು ನಿರ್ವಹಿಸತಕ್ಕದ್ದು.

## ಅಧ್ಯಾಯ-IV

## ಸರಕುಗಳ ತಪಾಸಣೆ ಮತ್ತು ಶ್ರೇಣೀಕರಣ

**22. ತಪಾಸಣೆ.–** ನಿಯಮಿಸಲಾದ ಪ್ರಾಧಿಕಾರವು, ಯಾವುದೇ ಕಾಲದಲ್ಲಿ, ತಮ್ಮ ಕೆಲಸದ ವೇಳೆಯಲ್ಲಿ, ಈ ಅಧಿನಿಯಮದ ಮತ್ತು ನಿಯಮಗಳ ಅಗತ್ಯತೆಗಳನ್ನು ಪಾಲಿಸಲಾಗುತ್ತಿದೆಯೆಂಬುದನ್ನು ಮನದಟ್ಟು ಮಾಡಿಕೊಳ್ಳುವ ಉದ್ದೇಶಕ್ಕಾಗಿ ಲೈಸೆನ್ಸ್ ಪಡೆದ ಯಾವುದೇ ಉಗ್ರಾಣವನ್ನು, ಅದರ ಯಂತ್ರ ಸಾಮಗ್ರಿಯನ್ನು ಮತ್ತು ಸಾಧನ ಸಲಕರಣೆಗಳನ್ನು, ಅದರಲ್ಲಿ ದಾಸ್ತಾನು ಇಡಲಾದ ಸರಕುಗಳನ್ನು ಮತ್ತು ಅದಕ್ಕೆ ಸಂಬಂಧಪಟ್ಟ ಲೆಕ್ಕದ ಪುಸ್ತಕಗಳನ್ನು ಮತ್ತು ದಾಖಲೆಗಳನ್ನು ತಪಾಸಣೆ ಮಾಡತಕ್ಕದ್ದು ಅಥವಾ ಪರೀಕ್ಷಿಸತಕ್ಕದ್ದು ಅಥವಾ ತಪಾಸಣೆ ಮಾಡುವಂತೆ ಅಥವಾ ಪರೀಕ್ಷಿಸುವಂತೆ ಮಾಡತಕ್ಕದ್ದು.

**23. ತೂಕ ಮಾಡುವವರು, ಮಾದರಿಗಳ ಪರೀಕ್ಷಕರು ಮತ್ತು ಶ್ರೇಣಿಕಾರರು ಲೈಸೆನ್ಸುಗಳನ್ನು ಪಡೆದಿರುವುದು.–** (1) ನಿಯಮಿಸಲಾದ ಪ್ರಾಧಿಕಾರವು, ನಿಯಮಿಸಲಾದ ರೀತಿಯಲ್ಲಿ ಅರ್ಜಿ ಸಲ್ಲಿಸಿದ ಮೇಲೆ ಮತ್ತು ನಿಯಮಿಸಲಾದ ಫೀಜುಗಳನ್ನು ಸಂದಾಯ ಮಾಡಿದ ಮೇಲೆ ನಿಯಮಿಸಲಾದ ಅರ್ಹತೆಗಳನ್ನು ಹೊಂದಿರುವ ವ್ಯಕ್ತಿಗಳಿಗೆ, ಲೈಸೆನ್ಸು ಪಡೆದ ಉಗ್ರಾಣದಲ್ಲಿ ದಾಸ್ತಾನು ಇಡಲಾದ ಅಥವಾ ಇಡಲಾಗುವ ಯಾವುವೇ ಸರಕುಗಳಿಗೆ ಸಂಬಂಧಿಸಿದಂತೆ ತೂಕ ಮಾಡುವವರಾಗಿ, ಮಾದರಿಗಳ ಪರೀಕ್ಷಕರಾಗಿ ಮತ್ತು ಶ್ರೇಣಿಕಾರರಾಗಿ ಕಾರ್ಯನಿರ್ವಹಿಸಲು ಮತ್ತು ಪರೀಕ್ಷಿಸಿದ ಸರಕುಗಳ ತೂಕ, ಪ್ರಮಾಣ, ಗುಣಮಟ್ಟ ಅಥವಾ ಶ್ರೇಣಿಗೆ ಸಂಬಂಧಪಟ್ಟಂತೆ ಪ್ರಮಾಣಪತ್ರಗಳನ್ನು ನೀಡುವುದಕ್ಕೆ ಅವರನ್ನು ಹಕ್ಕುಳ್ಳವರನ್ನಾಗಿ ಮಾಡುವ ಸಲುವಾಗಿ ಲೈಸೆನ್ಸುಗಳನ್ನು ನೀಡತಕ್ಕದ್ದು.

(2) ಹಾಗೆ ನೀಡಲಾದ ಯಾವುದೇ ಪ್ರಮಾಣಪತ್ರವು, 24 ನೇ ಪ್ರಕರಣದ ಉಪಬಂಧಗಳಿಗೊಳಪಟ್ಟು, ಹಾಗೆ ಪ್ರಮಾಣೀಕರಿಸಲಾದ ಸರಕುಗಳ ತೂಕ, ಪ್ರಮಾಣ, ಗುಣಮಟ್ಟ ಅಥವಾ ಶ್ರೇಣಿಗೆ ಸಂಬಂಧಪಟ್ಟಂತೆ ಉಗ್ರಾಣಪಾಲಕ ಮತ್ತು ಸರಕು ದಾಸ್ತಾನುದಾರನಿಗೆ ಬಂಧಕವಾಗಿರತಕ್ಕದ್ದು.

(3) ಈ ಪ್ರಕರಣದ ಅಡಿಯಲ್ಲಿ ಲೈಸೆನ್ಸ್ ಪಡೆದಿರದ ಯಾರೇ ವ್ಯಕ್ತಿಯು, ತೂಕ ಮಾಡುವವನೆಂದು, ಮಾದರಿ ಪರೀಕ್ಷಕನೆಂದು ಅಥವಾ ಶ್ರೇಣಿಕಾರನೆಂದು ವರ್ತಿಸತಕ್ಕದ್ದಲ್ಲ ಅಥವಾ ಹಾಗೆಂದು ಕರೆಸಿಕೊಳ್ಳತಕ್ಕದ್ದಲ್ಲ.

**24. 23ನೇ ಪ್ರಕರಣದ ಅಡಿಯಲ್ಲಿನ ಲೈಸೆನ್ಸುಗಳಿಗೆ ಸಂಬಂಧಿಸಿದಂತೆ ಉಪಬಂಧಗಳು.-** (1) 23ನೇ ಪ್ರಕರಣದ ಅಡಿಯಲ್ಲಿ ತೂಕ ಮಾಡುವವನಿಗೆ, ಮಾದರಿ ಪರೀಕ್ಷಕನಿಗೆ ಅಥವಾ ಶ್ರೇಣಿಕಾರನಿಗೆ ನೀಡಲಾದ ಪ್ರತಿಯೊಂದು ಲೈಸೆನ್ಸು ನಿಯಮಿಸಲಾದ ಅವಧಿಯವರೆಗೆ ಮಾನ್ಯವಾಗಿರತಕ್ಕದ್ದು ಮತ್ತು ಅರ್ಜಿಯನ್ನು ಸಲ್ಲಿಸಿದ ಮೇಲೆ ಮತ್ತು ನಿಯಮಿಸಲಾದ ಚಾರ್ಜ್‌ನ್ನು ಸಂದಾಯ ಮಾಡಿದ ಮೇಲೆ, ನಿಯಮಿಸಲಾದ ಪ್ರಾಧಿಕಾರವು ನಿಯಮಿಸಲಾದ ಅವಧಿಯವರೆಗೆ, ಅದನ್ನು ಕಾಲಕಾಲಕ್ಕೆ ನವೀಕರಿಸಬಹುದಾಗಿದೆ.

(2) ನಿಯಮಿಸಲಾದ ಪ್ರಾಧಿಕಾರವು ಕಾರಣಗಳನ್ನು ಲಿಖಿತದಲ್ಲಿ ದಾಖಲು ಮಾಡಿ, ಯಾವುದೇ ಅಂಥ ಲೈಸೆನ್ಸನ್ನು ತಡೆಹಿಡಿಯಬಹುದು ಅಥವಾ ರದ್ದುಗೊಳಿಸಬಹುದು.

(3) (2)ನೇ ಉಪ ಪ್ರಕರಣದ ಅಡಿಯಲ್ಲಿ ಲೈಸೆನ್ಸನ್ನು ತಡೆಹಿಡಿಯುವುದಕ್ಕೆ ಅಥವಾ ರದ್ದುಗೊಳಿಸುವುದಕ್ಕೆ ಮುಂಚೆ, ನಿಯಮಿಸಲಾದ ಪ್ರಾಧಿಕಾರವು ಲೈಸೆನ್ಸುದಾರನಿಗೆ, ಯಾವ ಕಾರಣದ ಮೇಲೆ ಅವನ ಲೈಸೆನ್ಸನ್ನು ತಡೆಹಿಡಿಯುವ ಅಥವಾ ರದ್ದುಗೊಳಿಸುವ ಉದ್ದೇಶವಿದೆ ಎಂಬ ಬಗ್ಗೆ ಕಾರಣಗಳನ್ನು ತಿಳಿಸಿ ನೋಟೀಸನ್ನು ನೀಡತಕ್ಕದ್ದು ಮತ್ತು ಅದರ ವಿರುದ್ಧ ಕಾರಣ ನೀಡಲು ಅವನಿಗೆ ಯುಕ್ತ ಅವಕಾಶವನ್ನು ನೀಡತಕ್ಕದ್ದು.

(4) ಲೈಸೆನ್ಸುದಾರನ ವಿವರಣೆಗಳು ಯಾವುವಾದರೂ ಇದ್ದರೆ, ಅವುಗಳನ್ನು ಪರಿಗಣಿಸಿದ ತರುವಾಯ, ನಿಯಮಿಸಲಾದ ಪ್ರಾಧಿಕಾರವು ತಾನು ನ್ಯಾಯೋಚಿತವೆಂದು ಭಾವಿಸುವಂಥ ಆದೇಶಗಳನ್ನು ಹೊರಡಿಸತಕ್ಕದ್ದು.

(5) ಅಂಥ ಯಾವುದೇ ಲೈಸೆನ್ಸನ್ನು ಹೊಂದಿರುವವನು, ಅದರ ಅವಧಿ ಮುಗಿದ ತರುವಾಯ ಅಥವಾ ಅದನ್ನು ತಡೆಹಿಡಿದ ಅಥವಾ ರದ್ದುಗೊಳಿಸಿದ ಆದೇಶವನ್ನು ಸ್ವೀಕರಿಸಿದ ತರುವಾಯ, ಆ ಲೈಸೆನ್ಸನ್ನು ನಿಯಮಿಸಲಾದ ಪ್ರಾಧಿಕಾರಕ್ಕೆ ಹಿಂದಿರುಗಿಸತಕ್ಕದ್ದು.

(6) ತೂಕ ಮಾಡುವವನಿಗೆ, ಮಾದರಿಗಳ ಪರೀಕ್ಷಕನಿಗೆ ಅಥವಾ ಶ್ರೇಣಿಕಾರನಿಗೆ ನೀಡಿದ ಲೈಸೆನ್ಸು ಕಳೆದು ಹೋದರೆ, ಹಾಳಾದರೆ, ಹರಿದು ಹೋದರೆ, ವಿರೂಪಗೊಂಡರೆ ಅಥವಾ ಅನ್ಯಥಾ ಓದಲು ಆಗದಂತಿದ್ದರೆ, ನಿಯಮಿಸಲಾದ ಪ್ರಾಧಿಕಾರವು, ಸಂದರ್ಭಾನುಸಾರ, ತೂಕ ಮಾಡುವವನ, ಮಾದರಿಗಳ ಪರೀಕ್ಷಕನ, ಶ್ರೇಣಿಕಾರನ ಅರ್ಜಿಯ ಮೇಲೆ ಮತ್ತು ನಿಯಮಿಸಿದ ಫೀಜನ್ನು ಸಂದಾಯ ಮಾಡಿದ ಮೇಲೆ ಒಂದು ಲೈಸೆನ್ಸ್‌ನ ದ್ವಿಪ್ರತಿಯನ್ನು ನೀಡತಕ್ಕದ್ದು.

**25. ಸರಕುಗಳನ್ನು ತೂಕ ಮಾಡುವುದು, ಮುಂತಾದವುಗಳಿಗಾಗಿ ನೀಡಬೇಕಾದ ಸೌಕರ್ಯಗಳು.-** ಪ್ರತಿಯೊಬ್ಬ ಉಗ್ರಾಣಪಾಲಕನು, ತನ್ನ ಉಗ್ರಾಣದಲ್ಲಿ ಇಡಲಾದ ಯಾವುವೇ ಸರಕುಗಳನ್ನು ತೂಕ ಮಾಡಲು, ಮಾದರಿಗಳನ್ನು ಪರೀಕ್ಷಿಸಲು ಮತ್ತು ಶ್ರೇಣೀಕರಣಗೊಳಿಸಲು ಸೌಲಭ್ಯಗಳನ್ನು ಒದಗಿಸತಕ್ಕದ್ದು.

## ಅಧ್ಯಾಯ-V

## ಉಗ್ರಾಣ ರಸೀದಿಗಳು

**26. ನೀಡಬೇಕಾದ ರಸೀದಿ.-** ಉಗ್ರಾಣಪಾಲಕನು, ತನ್ನ ಉಗ್ರಾಣದಲ್ಲಿ ಸರಕುಗಳನ್ನು ದಾಸ್ತಾನು ಇಟ್ಟ ಪ್ರತಿಯೊಬ್ಬ ಸರಕು ದಾಸ್ತಾನುದಾರನಿಗೆ, ಸರಕುಗಳ ಪೂರ್ಣ ವಿವರಗಳನ್ನೊಳಗೊಂಡಿರುವ ಮತ್ತು ನಿಯಮಿಸಿದ ನಮೂನೆಯಲ್ಲಿರುವ ಒಂದು ರಸೀದಿಯನ್ನು ನೀಡತಕ್ಕದ್ದು.

**27. ಉಗ್ರಾಣಗಳಲ್ಲಿ ಸರಕು ದಾಸ್ತಾನು ಇಡುವುದಕ್ಕೆ ರಸೀದಿಗಳು.-** ಉಗ್ರಾಣಪಾಲಕನು ನೀಡಿದ ರಸೀದಿಯು, ಅದರ ಮೇಲೆ ಅನ್ಯಥಾ ನಿರ್ದಿಷ್ಟಪಡಿಸಿದ ಹೊರತು, ಹಿಂಬರಹದ ಮೂಲಕ ವರ್ಗಾವಣೆ ಮಾಡಬಹುದಾಗಿರತಕ್ಕದ್ದು ಮತ್ತು ಮೂಲ ಸರಕುಗಳ ದಾಸ್ತಾನುದಾರನಿಗೆ ಅನ್ವಯಿಸುವಂಥಹದೇ ರೀತಿಯ ನಿಬಂಧನೆ ಮತ್ತು ಷರತ್ತುಗಳ ಮೇಲೆ ಕಾನೂನು ಸಮ್ಮತ ಧಾರಕನು ಅದರಲ್ಲಿ ನಿರ್ದಿಷ್ಟಪಡಿಸಲಾದ ಸರಕುಗಳನ್ನು ಪಡೆಯಲು ಹಕ್ಕುಳ್ಳವನಾಗಿರತಕ್ಕದ್ದು.

**28. ರಸೀದಿಯ ದ್ವಿಪ್ರತಿ.-** ರಸೀದಿಯು ಕಳೆದುಹೋದರೆ, ಹಾಳಾದರೆ ಅಥವಾ ನಾಶವಾದರೆ, ಉಗ್ರಾಣಪಾಲಕನು, ಸರಕು ದಾಸ್ತಾನುದಾರನು ಸಲ್ಲಿಸಿದ ಅರ್ಜಿಯ ಮೇಲೆ ಮತ್ತು ನಿಯಮಿಸಿದ ಫೀಜನ್ನು ಸಂದಾಯ ಮಾಡಿದ ಮೇಲೆ ವಿಧಿಸಲು ತಾನು ಸೂಕ್ತವೆಂದು ಭಾವಿಸಬಹುದಾದಂಥ, ಆ ಉದ್ದೇಶಕ್ಕಾಗಿ ನಿಯಮಿಸಲಾದ ನಿಯಮಗಳಲ್ಲಿ ಒಳಗೊಂಡಿರುವ ಷರತ್ತುಗಳ ಮೇಲೆ ರಸೀದಿಯ ಒಂದು ದ್ವಿಪ್ರತಿಯನ್ನು ನೀಡತಕ್ಕದ್ದು.

## ಅಧ್ಯಾಯ-VI

### ಸಂಕೀರ್ಣ

**29. ಅಪೀಲುಗಳು, ವಿವಾದಗಳು ಮತ್ತು ದೂರುಗಳ ತೀರ್ಮಾನ.–** (1) ಉಗ್ರಾಣಪಾಲಕನ ಅಥವಾ ತೂಕ ಮಾಡುವವನ ಅಥವಾ ಮಾದರಿಗಳ ಪರೀಕ್ಷಕನ ಅಥವಾ ಶ್ರೇಣಿಕಾರನ ಸಂಬಂಧದಲ್ಲಿ ಲೈಸೆನ್ಸು ಮಂಜೂರು ಮಾಡುವುದನ್ನು ಅಥವಾ ನವೀಕರಿಸುವುದನ್ನು ತಿರಸ್ಕರಿಸುವ ಅಥವಾ ಅಂಥ ಯಾವುದೇ ಲೈಸೆನ್ಸನ್ನು ತಡೆಹಿಡಿಯುವ ಅಥವಾ ರದ್ದುಗೊಳಿಸುವ ಬಗೆಗಿನ ನಿಯಮಿಸಲಾದ ಪ್ರಾಧಿಕಾರದ ಯಾವುದೇ ಆದೇಶದ ವಿರುದ್ಧ ಅಥವಾ ನಿಯಮಿಸಲಾದ ಪ್ರಾಧಿಕಾರದ ಇತರ ಯಾವುದೇ ಆದೇಶದ ವಿರುದ್ಧ ನಿಯಮಿಸಲಾದಂಥ ಪ್ರಾಧಿಕಾರಕ್ಕೆ ಅಪೀಲು ಸಲ್ಲಿಸತಕ್ಕದ್ದು ಮತ್ತು ಅದು ನಿಯಮಿಸಬಹುದಾದಂಥ ಅವಧಿಯೊಳಗೆ ಇರತಕ್ಕದ್ದು.

(2) ಅಂಥ ಅಪೀಲು ಪ್ರಾಧಿಕಾರದ ತೀರ್ಮಾನವೇ ಅಂತಿಮವಾಗತಕ್ಕದ್ದು.

**30. ಲೈಸೆನ್ಸನ್ನು ತಡೆಹಿಡಿದುದಕ್ಕಾಗಿ ಅಥವಾ ರದ್ದುಗೊಳಿಸಿದುದಕ್ಕಾಗಿ ಯಾವುದೇ ನಷ್ಟ ಪರಿಹಾರವಿಲ್ಲದಿರುವುದು.–** ಈ ಅಧಿನಿಯಮದ ಅಡಿಯಲ್ಲಿ ಯಾವುದೇ ಲೈಸೆನ್ಸನ್ನು ತಡೆಹಿಡಿದಿರುವಲ್ಲಿ ಅಥವಾ ರದ್ದುಗೊಳಿಸಿರುವಲ್ಲಿ, ಲೈಸೆನ್ಸುದಾರನು ಅದಕ್ಕಾಗಿ ಯಾವುದೇ ನಷ್ಟ ಪರಿಹಾರಕ್ಕೆ ಹಕ್ಕುಳ್ಳವನಾಗಿರತಕ್ಕದ್ದಲ್ಲ ಅಥವಾ ಲೈಸೆನ್ಸಿಗಾಗಿ ಅವನು ಸಂದಾಯ ಮಾಡಿದ ಯಾವುದೇ ಫೀಜಿನ ಮರು ಪಾವತಿಗೆ ಹಕ್ಕುಳ್ಳವನಾಗಿರತಕ್ಕದ್ದಲ್ಲ.

**31. ಭದ್ರತಾ ಮೊಬಲಗನ್ನು ಮುಟ್ಟುಗೋಲು ಹಾಕಿಕೊಳ್ಳುವುದು ಮತ್ತು ಅದನ್ನು ಭೂಕಂದಾಯದ ಬಾಕಿಯಂತೆ ವಸೂಲು ಮಾಡುವುದು.–** (1) ಉಗ್ರಾಣಪಾಲಕನು ತನ್ನ ಲೈಸೆನ್ಸಿನ ಯಾವುವೇ ನಿಬಂಧನೆಗಳು ಅಥವಾ ಷರತ್ತುಗಳನ್ನು ಅಥವಾ ಈ ಅಧಿನಿಯಮದ ಯಾವುದೇ ಉಪಬಂಧವನ್ನು ಪಾಲಿಸಲು ತಪ್ಪಿದರೆ ಅಥವಾ ಅವುಗಳನ್ನು ಉಲ್ಲಂಘಿಸಿದರೆ, ಅವನು ಒಳಗಾಗಬಹುದಾದ ಇತರ ಯಾವುದೇ ಜುಲ್ಮಾನೆಗೆ ಬಾಧಕವಾಗದಂತೆ, ಈ ಅಧಿನಿಯಮದ ಉಪಬಂಧಗಳ ಅಡಿಯಲ್ಲಿ ಅವನು ಬರೆದುಕೊಟ್ಟ ಬಂಧಪತ್ರದ ಮೇರೆಗೆ ಅವನಿಂದ ಠೇವಣಿಯಾಗಿಡಲ್ಪಟ್ಟ ಭದ್ರತೆಯ ಮೊಬಲಗನ್ನು ಮುಟ್ಟುಗೋಲು ಹಾಕಿಕೊಳ್ಳಲು ಬದ್ಧನಾಗಿರತಕ್ಕದ್ದು ಮತ್ತು ಅಂಥ ಬಂಧಪತ್ರದ ಅಡಿಯಲ್ಲಿ ಬಾಕಿಯಿರುವ ಮೊಬಲಗನ್ನು ಅವನಿಂದ ಅಥವಾ ಅವನ ಜಾಮೀನುದಾರರಿಂದ ಅಥವಾ ಅವನ ಉತ್ತರಾಧಿಕಾರಿಗಳಿಂದ ಅಥವಾ ಕಾನೂನು ಸಮ್ಮತ ಪ್ರತಿನಿಧಿಗಳಿಂದ ಭೂ ಕಂದಾಯದ ಬಾಕಿಯಂತೆ ವಸೂಲು ಮಾಡತಕ್ಕದ್ದು.

(2) ರಾಜ್ಯ ಸರ್ಕಾರವು, ಹಾಗೆ ಮುಟ್ಟುಗೋಲು ಹಾಕಿಕೊಂಡ ಅಥವಾ ವಸೂಲು ಮಾಡಿದ ಮೊಬಲಗನ್ನು, ಉಗ್ರಾಣಪಾಲಕನು ತನ್ನ ಲೈಸೆನ್ಸಿನ ಯಾವುದೇ ನಿಬಂಧನೆಗಳನ್ನು ಅಥವಾ ಷರತ್ತುಗಳನ್ನು ಅಥವಾ ಈ ಅಧಿನಿಯಮದ ಯಾವುದೇ ಉಪಬಂಧವನ್ನು ಪಾಲಿಸಲು ತಪ್ಪಿದ ಅಥವಾ ಅವುಗಳನ್ನು ಉಲ್ಲಂಘಿಸಿದ ಕಾರಣದಿಂದಾಗಿ ನಷ್ಟ ಉಂಟಾದ ಯಾರೇ ವ್ಯಕ್ತಿಗೆ ಸಂದಾಯಮಾಡತಕ್ಕದ್ದು.

**32. ಅಧಿನಿಯಮಕ್ಕೆ ಅಸಂಗತವಾದ ಕರಾರುಗಳು ಮತ್ತು ಒಪ್ಪಂದಗಳು ಶೂನ್ಯವಾಗತಕ್ಕದ್ದು.–** ಈ ಅಧಿನಿಯಮದ ಉಪಬಂಧಗಳಿಗೆ ಅಥವಾ ನಿಯಮಗಳಿಗೆ ಅಸಂಗತವಾಗಿರುವ ಪ್ರತಿಯೊಂದು ಕರಾರು ಅಥವಾ ಒಪ್ಪಂದವು ಹಾಗೆ ಅಸಂಗತವಾಗಿರುವಷ್ಟರ ಮಟ್ಟಿಗೆ ಶೂನ್ಯವಾಗಿರತಕ್ಕದ್ದು.

[1][**32ಎ. ಉಗ್ರಾಣಪಾಲಕರು ಮತ್ತು ಸರಕು ದಾಸ್ತಾನುದಾರರು 1944 ರ ಕೇಂದ್ರ ಅಧಿನಿಯಮ 1ರ ಉಪಬಂಧಗಳನ್ನು ಪಾಲಿಸುವುದು.–** ಕೇಂದ್ರ ಅಬಕಾರಿ ಮತ್ತು ಉಪ್ಪು ಅಧಿನಿಯಮ, 1944ರ ಉಪಬಂಧಗಳು ಅನ್ವಯವಾಗುವ ಸರಕುಗಳನ್ನು ಈ ಅಧಿನಿಯಮದ ಅಡಿಯಲ್ಲಿ ಉಗ್ರಾಣದಲ್ಲಿ ಇಡುವುದಕ್ಕೆ ಸಂಬಂಧಿಸಿದಂತೆ, ಪ್ರತಿಯೊಬ್ಬ ಉಗ್ರಾಣಪಾಲಕನು ಅಥವಾ ಸರಕು ದಾಸ್ತಾನುದಾರನು ಸದರಿ ಅಧಿನಿಯಮದ ಉಪಬಂಧಗಳನ್ನು ಮತ್ತು ಅದರ ಅಡಿಯಲ್ಲಿನ ನಿಯಮಗಳನ್ನು ಮತ್ತು ಹೊರಡಿಸಲಾದ ಅಧಿಸೂಚನೆಗಳನ್ನು, ಅವು ಅಂಥ ಸರಕುಗಳಿಗೆ ಅನ್ವಯವಾಗುವಷ್ಟರ ಮಟ್ಟಿಗೆ ಪಾಲಿಸತಕ್ಕದ್ದು][1].

**33. ದಂಡ.–** (1) ಈ ಅಧಿನಿಯಮದ ಯಾವುದೇ ಉಪಬಂಧವನ್ನು ಪಾಲಿಸಲು ತಪ್ಪುವ ಅಥವಾ ಅದನ್ನು ಉಲ್ಲಂಘಿಸಿ ವರ್ತಿಸುವ ಯಾರೇ ವ್ಯಕ್ತಿಯನ್ನು, ಈ ಅಧಿನಿಯಮದ ಅಡಿಯಲ್ಲಿ ಅಪರಾಧ ಮಾಡಿದ್ದಾನೆಂದು ಭಾವಿಸತಕ್ಕದ್ದು ಮತ್ತು ಅಪರಾಧ ನಿರ್ಣಯವಾದ ಮೇಲೆ ಈ ಮುಂದಿನಂತೆ ದಂಡಿತನಾಗತಕ್ಕದ್ದು,-

1. 1965ರ ಅಧಿನಿಯಮ 22 ರ ಮೂಲಕ 18.11.1965ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(ಎ) 3ನೇ ಅಥವಾ 20 ನೇ ಪ್ರಕರಣದ ಉಪಬಂಧದ ಉಲ್ಲಂಘನೆಯ ಸಂದರ್ಭದಲ್ಲಿ, ಆರು ತಿಂಗಳವರೆಗೆ ವಿಸ್ತರಿಸಬಹುದಾದ ಸಾದಾ ಕಾರಾವಾಸದಿಂದ ಅಥವಾ ಒಂದು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಅಥವಾ ಅವೆರಡರಿಂದ;

(ಬಿ) ಇತರ ಯಾವುದೇ ಸಂದರ್ಭದಲ್ಲಿ ಒಂದು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆ.

(2) (ಎ) (1) ನೇ ಉಪ ಪ್ರಕರಣದ ಅಡಿಯಲ್ಲಿ ಒಂದು ಅಪರಾಧವನ್ನು ಕಂಪನಿಯು ಮಾಡಿರುವಲ್ಲಿ, ಆ ಕಂಪನಿ ಮತ್ತು ಅಪರಾಧ ಮಾಡಿದ ಕಾಲದಲ್ಲಿ ಕಂಪನಿಯ ಪ್ರಭಾರದಲ್ಲಿದ್ದ ಮತ್ತು ಅದರ ವ್ಯವಹಾರವನ್ನು ನಡೆಸುವುದಕ್ಕೆ ಕಂಪನಿಗೆ ಜವಾಬ್ದಾರನಾಗಿದ್ದ ಪ್ರತಿಯೊಬ್ಬ ವ್ಯಕ್ತಿಯನ್ನು, ಅಪರಾಧದ ದೋಷಿಯೆಂದು ಭಾವಿಸತಕ್ಕದ್ದು ಮತ್ತು ತಮ್ಮ ವಿರುದ್ಧದ ಕಾನೂನು ವ್ಯವಹರಣೆಗಳಿಗೆ ಮತ್ತು ತದನುಸಾರವಾಗಿ ದಂಡನೆಗೆ ಗುರಿಯಾಗತಕ್ಕದ್ದು:

ಪರಂತು, ಅಪರಾಧವು ತನ್ನ ತಿಳಿವಳಿಕೆಗೆ ಬಾರದೆ ನಡೆಯಿತೆಂದು ಅಥವಾ ಅಂಥ ಅಪರಾಧವನ್ನು ತಡೆಯುವುದಕ್ಕೆ ತಾನು ಯುಕ್ತ ಜಾಗರೂಕತೆ ವಹಿಸಿದ್ದೆನೆಂದು ಅವನು ರುಜುವಾತುಪಡಿಸಿದರೆ, ಈ ಖಂಡದಲ್ಲಿ ಇರುವುದು ಯಾವುದೂ, ಅವನನ್ನು ಯಾವುದೇ ಶಿಕ್ಷೆಗೆ ಗುರಿಪಡಿಸತಕ್ಕದ್ದಲ್ಲ.

(ಬಿ) (ಎ) ಖಂಡದಲ್ಲಿ ಏನೇ ಇದ್ದರೂ, (1) ನೇ ಉಪ ಪ್ರಕರಣದ ಅಡಿಯಲ್ಲಿನ ಅಪರಾಧವನ್ನು ಕಂಪನಿಯು ಮಾಡಿರುವಲ್ಲಿ ಮತ್ತು ಆ ಅಪರಾಧವು ಕಂಪನಿಯ ಯಾರೇ ನಿರ್ದೇಶಕ, ವ್ಯವಸ್ಥಾಪಕ, ಕಾರ್ಯದರ್ಶಿ ಅಥವಾ ಇತರ ಅಧಿಕಾರಿಯ ಸಮ್ಮತಿ ಅಥವಾ ಪರೋಕ್ಷ ಸಮ್ಮತಿಯಿಂದ ಮಾಡಲಾಗಿದೆಯೆಂದು ಅಥವಾ ಅವರ ಯಾವುದೇ ನಿರ್ಲಕ್ಷ್ಯದ ಕಾರಣದಿಂದ ಅಪರಾಧವು ನಡೆದಿದೆಯೆಂದು ರುಜುವಾತಾದರೆ, ಅಂಥ ನಿರ್ದೇಶಕ, ವ್ಯವಸ್ಥಾಪಕ, ಕಾರ್ಯದರ್ಶಿ ಅಥವಾ ಇತರ ಅಧಿಕಾರಿಯನ್ನು ಸಹ ಆ ಅಪರಾಧದ ದೋಷಿಯೆಂದು ಭಾವಿಸತಕ್ಕದ್ದು ಮತ್ತು ಅವರು ತಮ್ಮ ವಿರುದ್ಧದ ವ್ಯವಹರಣೆಗಳಿಗೆ ಗುರಿಯಾಗತಕ್ಕದ್ದು ಮತ್ತು ತದನುಸಾರವಾಗಿ ದಂಡಿತರಾಗತಕ್ಕದ್ದು.

**ವಿವರಣೆ:-** ಈ ಉಪ ಪ್ರಕರಣದ ಉದ್ದೇಶಗಳಿಗಾಗಿ,-

(i) "ಒಂದು ಕಂಪನಿ" ಎಂದರೆ ಯಾವುದೇ ನಿಗಮಿತ ನಿಕಾಯ ಮತ್ತು ಇದು ವಾಣಿಜ್ಯ ಸಂಸ್ಥೆ ಮತ್ತು ವ್ಯಕ್ತಿಗಳ ಇತರ ಸಂಘವನ್ನು ಒಳಗೊಳ್ಳುತ್ತದೆ; ಮತ್ತು

(ii) ವಾಣಿಜ್ಯ ಸಂಸ್ಥೆಯ ಸಂಬಂಧದಲ್ಲಿ "ನಿರ್ದೇಶಕ" ಎಂದರೆ ವಾಣಿಜ್ಯ ಸಂಸ್ಥೆಯ ಪಾಲುದಾರ.

**34. ನಿಯಮಗಳು.-** (1) ರಾಜ್ಯ ಸರ್ಕಾರವು, ಈ ಅಧಿನಿಯಮದ ಉದ್ದೇಶಗಳನ್ನು ಅಧಿಸೂಚನೆ ಮೂಲಕ ಮತ್ತು ಪೂರ್ವ ಪ್ರಕಟಣೆಯ ನಂತರ ಅನುಷ್ಠಾನಗೊಳಿಸಲಾದ ನಿಯಮಗಳನ್ನು ರಚಿಸತಕ್ಕದ್ದು.

(2) ವಿಶೇಷವಾಗಿ ಮತ್ತು ಈ ಹಿಂದೆ ಹೇಳಿದ ಅಧಿಕಾರದ ಸಾಮಾನ್ಯಾನ್ವಯಕ್ಕೆ ಬಾಧಕ ಉಂಟಾಗದಂತೆ, ಅಂಥ ನಿಯಮಗಳು, ಅನುಸೂಚಿಗೆ ಯಾವುವೇ ಸರಕುಗಳನ್ನು ಸೇರ್ಪಡೆ ಮಾಡಬಹುದು ಅಥವಾ ಅನುಸೂಚಿಯಿಂದ ಯಾವುವೇ ಸರಕುಗಳನ್ನು ಬಿಟ್ಟು ಬಿಡಬಹುದು, ಅಥವಾ,-

(ಎ) ನಿಯಮಿಸಬೇಕೆಂದು ಈ ಅಧಿನಿಯಮದಿಂದ ವ್ಯಕ್ತವಾಗಿ ಅಗತ್ಯಪಡಿಸಲಾದ ಅಥವಾ ಅನುಮತಿಸಲಾದ ವಿಷಯಗಳು;

(ಬಿ) ಉಗ್ರಾಣಪಾಲಕರಿಗೆ ನೀಡಲಾಗುವ ಲೈಸೆನ್ಸಿನಲ್ಲಿ ಸೇರಿಸಬೇಕಾದ ಷರತ್ತುಗಳು ಮತ್ತು ಅಂಥ ಲೈಸೆನ್ಸುಗಳ ನಮೂನೆ;

(ಸಿ) ಉಗ್ರಾಣಪಾಲಕರಿಗೆ ನೀಡಿದ ಲೈಸೆನ್ಸುಗಳ ಮಂಜೂರಾತಿ, ಅಮಾನತು ಅಥವಾ ರದ್ದಿಯಾತಿಯ ಬಗ್ಗೆ ಮತ್ತು ಉಗ್ರಾಣಪಾಲಕರ ಹಾಗೂ ಲೈಸೆನ್ಸು ಪಡೆದ ಉಗ್ರಾಣಗಳ ಕ್ರೋಡೀಕೃತ ಪಟ್ಟಿಗಳ ಬಗ್ಗೆ ಪ್ರಕಟಣೆ;

(ಡಿ) ಉಗ್ರಾಣಪಾಲಕರು ನೀಡಿದ ಸೇವೆಗಳಿಗೆ ವಿಧಿಸಬಹುದಾದ ಚಾರ್ಜುಗಳು;

(ಇ) ಉಗ್ರಾಣಪಾಲಕರು ನಿರ್ವಹಿಸಬೇಕಾಗಿರುವ ಪುಸ್ತಕಗಳು, ಲೆಕ್ಕಪತ್ರಗಳು ಮತ್ತು ದಾಖಲೆಗಳು;

(ಎಫ್) ಲೈಸೆನ್ಸು ಪಡೆದಿರುವ ಉಗ್ರಾಣಗಳಲ್ಲಿ ಕೆಡುತ್ತ ಹೋಗುತ್ತಿರುವ ಅಥವಾ ಇನ್ನು ಮುಂದೆ ಕೆಡುವಂತಿರುವ ಸರಕುಗಳ ಮಾರಾಟಕ್ಕಾಗಿ ಬಹಿರಂಗ ಹರಾಜನ್ನು ನಡೆಸುವುದು ಮತ್ತು ಅಂಥ ಮಾರಾಟಗಳ ಉತ್ಪತ್ತಿಯನ್ನು ಲೆಕ್ಕಕ್ಕೆ ತೆಗೆದುಕೊಳ್ಳಬೇಕಾದ ರೀತಿ;

(ಜಿ) ಕುಗ್ಗುವಿಕೆಯಿಂದ ಅಥವಾ ಒಣಗುವಿಕೆಯಿಂದ ಅಥವಾ ತೇವಾಂಶ ಹೀರುವಿಕೆಯಿಂದ ಸರಕುಗಳ ತೂಕ ಅಥವಾ ಗಾತ್ರದಲ್ಲಿ ಆದ ನಷ್ಟ ಅಥವಾ ಹೆಚ್ಚಳದ ಪ್ರಮಾಣ;

(ಎಚ್) ಲೈಸೆನ್ಸ್ ಹೊಂದಿರುವ ಉಗ್ರಾಣಗಳಲ್ಲಿ ಸೋಂಕು ಇಲ್ಲದಂತೆ ಮತ್ತು ಅವುಗಳಲ್ಲಿ ದಾಸ್ತಾನುಮಾಡಿದ ಸರಕುಗಳಿಗೆ ಸೋಂಕು ತಗುಲದಂತೆ ನೋಡಿಕೊಳ್ಳುವುದು;

(ಐ) ಉಗ್ರಾಣಪಾಲಕನ ಸಾಮಾನ್ಯ ವ್ಯವಹಾರದ ದಕ್ಷ ನಿರ್ವಹಣೆ;

(ಜೆ) ತೂಕ ಮಾಡುವವರು, ಮಾದರಿಗಳ ಪರೀಕ್ಷಕರು ಅಥವಾ ಶ್ರೇಣಿಕಾರರಾಗಿ ಲೈಸೆನ್ಸು ನೀಡಿಕೆಗೆ ಅರ್ಜಿ ಸಲ್ಲಿಸುವ ವ್ಯಕ್ತಿಗಳು ಹೊಂದಿರಬೇಕಾದ ವಿದ್ಯಾರ್ಹತೆಗಳು; ಅವರ ಲೈಸೆನ್ಸುಗಳಲ್ಲಿ ಸೇರಿಸಬೇಕಾದ ಷರತ್ತುಗಳು; ಅವರಿಂದ ನೀಡಲಾಗುವ ಪ್ರಮಾಣಪತ್ರಗಳ ನಮೂನೆ ಮತ್ತು ಲೈಸೆನ್ಸುಗಳನ್ನು ಅಮಾನತಿನಲ್ಲಿಡಬಹುದಾದ ಅಥವಾ ರದ್ದುಗೊಳಿಸಬಹುದಾದ ಕಾರಣಗಳು;

(ಕೆ) ಲೈಸೆನ್ಸು ಹೊಂದಿರುವ ಉಗ್ರಾಣಗಳಲ್ಲಿ ಉಪಯೋಗಿಸಬೇಕಾದ ಸರಕುಗಳ ತೂಕ, ಅಳತೆ ಮತ್ತು ಶ್ರೇಣೀಕರಣಗಳ ಮಾನಕ;

(ಎಲ್) 29ನೇ ಪ್ರಕರಣದ ಅಡಿಯಲ್ಲಿ ಅಪೀಲನ್ನು ಯಾವ ಪ್ರಾಧಿಕಾರಕ್ಕೆ ಮತ್ತು ಯಾವ ಅವಧಿಯೊಳಗೆ ಸಲ್ಲಿಸಬೇಕೋ ಆ ಪ್ರಾಧಿಕಾರ ಮತ್ತು ಅಂಥ ಅವಧಿ;

(ಎಂ) ಈ ಅಧಿನಿಯಮದ ಅಡಿಯಲ್ಲಿ ನೋಟೀಸುಗಳನ್ನು ನೀಡುವ ವಿಧಾನ.

(3) ಈ ಅಧಿನಿಯಮದ ಅಡಿಯಲ್ಲಿ ರಚಿಸಲಾದ ಪ್ರತಿಯೊಂದು ನಿಯಮವನ್ನು, ಅದನ್ನು ರಚಿಸಿದ ತರುವಾಯ ಆದಷ್ಟು ಬೇಗನೆ, ರಾಜ್ಯ ವಿಧಾನಮಂಡಲದ ಪ್ರತಿಯೊಂದು ಸದನದ ಮುಂದೆ, ಅದು ಒಂದು ಅಧಿವೇಶನ ಅಥವಾ ಎರಡು ನಿರಂತರ ಅಧಿವೇಶನಗಳಲ್ಲಿ ಅಡಕವಾಗಬಹುದಾದ ಒಟ್ಟು ಮೂವತ್ತು ದಿನಗಳ ಅವಧಿಯವರೆಗೆ ಅದು ಅಧಿವೇಶನದಲ್ಲಿರುವಾಗ ಮಂಡಿಸತಕ್ಕದ್ದು ಮತ್ತು ಹಾಗೆ ಮಂಡಿಸಲಾದ ಅಧಿವೇಶನ ಅಥವಾ ತರುವಾಯದ ಅಧಿವೇಶನವು ಮುಕ್ತಾಯವಾಗುವುದಕ್ಕೆ ಮುಂಚೆ, ಉಭಯ ಸದನಗಳು ಆ ನಿಯಮದಲ್ಲಿ ಯಾವುದೇ ಮಾರ್ಪಾಡು ಮಾಡಬೇಕೆಂದು ಒಪ್ಪಿದರೆ ಅಥವಾ ಆ ನಿಯಮವನ್ನು ಮಾಡಕೂಡದೆಂದು ಉಭಯ ಸದನಗಳು ಒಪ್ಪಿದರೆ, ಆ ನಿಯಮವು ಆ ತರುವಾಯ, ಅಂಥ ಮಾರ್ಪಾಟಾದ ರೂಪದಲ್ಲಿ ಮಾತ್ರ ಪರಿಣಾಮಕಾರಿಯಾಗತಕ್ಕದ್ದು ಅಥವಾ ಸಂದರ್ಭಾನುಸಾರ, ಪರಿಣಾಮಕಾರಿಯಾಗತಕ್ಕದ್ದಲ್ಲ; ಆದಾಗ್ಯೂ, ಅಂಥ ಯಾವುದೇ ಮಾರ್ಪಾಡು ಅಥವಾ ರದ್ದಿಯಾತಿಯು ಆ ನಿಯಮದ ಅಡಿಯಲ್ಲಿ ಈ ಹಿಂದೆ ಮಾಡಲಾದ ಯಾವುದೇ ಕೃತ್ಯದ ಸಿಂಧುತ್ವಕ್ಕೆ ಬಾಧಕ ಉಂಟುಮಾಡತಕ್ಕದ್ದಲ್ಲ.

**35. ಅಧಿನಿಯಮವು ಕೆಲವು ಉಗ್ರಾಣಗಳಿಗೆ ಅನ್ವಯವಾಗದಿರುವುದು.–** ಈ ಅಧಿನಿಯಮದಲ್ಲಿ ಏನೇ ಒಳಗೊಂಡಿದ್ದರೂ, ಸಮುದ್ರ ಸೀಮಾ ಸುಂಕಗಳ ಅಧಿನಿಯಮ, 1878 (1878ರ ಕೇಂದ್ರ ಅಧಿನಿಯಮ VIII), ಅಂತರ್ದೇಶೀಯ ಬಂಧಪತ್ರಾಧೀನ ಉಗ್ರಾಣಗಳ ಅಧಿನಿಯಮ, 1896 (1896ರ ಕೇಂದ್ರ ಅಧಿನಿಯಮ VIII), ಕೇಂದ್ರ ಅಬಕಾರಿ ಮತ್ತು ಉಪ್ಪು ಅಧಿನಿಯಮ, 1944ರ (1944ರ ಕೇಂದ್ರ ಅಧಿನಿಯಮ 1) ಉಪಬಂಧಗಳು ಅಥವಾ ಅದರ ಅಡಿಯಲ್ಲಿ ರಚಿಸಲಾದ ನಿಯಮಗಳ ಅಡಿಯಲ್ಲಿ ನೇಮಕಗೊಂಡ ಅಥವಾ ಲೈಸೆನ್ಸು ಪಡೆದಿರುವ ಯಾವುದೇ ಉಗ್ರಾಣಕ್ಕೆ ಅನ್ವಯವಾಗತಕ್ಕದ್ದಲ್ಲ.

**36. ನಿರಸನ ಮತ್ತು ಉಳಿಸುವಿಕೆಗಳು.–** [1][ಬೆಳಗಾವಿ ಪ್ರದೇಶ][1] ದಲ್ಲಿ ಜಾರಿಯಲ್ಲಿರುವ ಮುಂಬೈ ಉಗ್ರಾಣಗಳ ಅಧಿನಿಯಮ, 1947 (1947ರ ಮುಂಬೈ ಅಧಿನಿಯಮ LVI), ಕೂರ್ಗ್ ಜಿಲ್ಲೆಯಲ್ಲಿ ಜಾರಿಯಲ್ಲಿರುವ ಕೂರ್ಗ್ ಉಗ್ರಾಣಗಳ ಅಧಿನಿಯಮ, 1956 (1956ರ ಕೂರ್ಗ್ ಅಧಿನಿಯಮ V), [1][ಗುಲ್ಬರ್ಗಾ ಪ್ರದೇಶ][1] ದಲ್ಲಿ ಜಾರಿಯಲ್ಲಿರುವ ಹೈದರಾಬಾದ್ ಉಗ್ರಾಣಗಳ ವಿನಿಯಮನ, 1358 ಫಸಲಿ, (1358 ಫಸಲಿಯ ಹೈದರಾಬಾದ್ ವಿನಿಯಮನ XLVI), [1][ಮಂಗಳೂರು ಮತ್ತು ಕೊಳ್ಳೇಗಾಲ ಪ್ರದೇಶ][1] ದಲ್ಲಿ ಜಾರಿಯಲ್ಲಿರುವ ಮದ್ರಾಸ್ ಉಗ್ರಾಣಗಳ ಅಧಿನಿಯಮ, 1951 (1951ರ ಮದ್ರಾಸ್ ಅಧಿನಿಯಮ XV), ಬಳ್ಳಾರಿ ಜಿಲ್ಲೆಯಲ್ಲಿ ಜಾರಿಯಲ್ಲಿರುವ ಮದ್ರಾಸ್ ಉಗ್ರಾಣಗಳ ಅಧಿನಿಯಮ,

1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ, 1973ರ ಮೂಲಕ 1.11.1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

1951 (1951ರ ಮದ್ರಾಸ್ ಅಧಿನಿಯಮ XV), ಮೈಸೂರು ಪ್ರದೇಶದಲ್ಲಿ ಜಾರಿಯಲ್ಲಿರುವ ಮೈಸೂರು ಉಗ್ರಾಣಗಳ ಅಧಿನಿಯಮ, 1951 (1951ರ ಮೈಸೂರು ಅಧಿನಿಯಮ XXIX) - ಇವುಗಳನ್ನು ಈ ಮೂಲಕ ನಿರಸನಗೊಳಿಸಲಾಗಿದೆ:

ಪರಂತು, [1][ಕರ್ನಾಟಕ][1] ಸಾಮಾನ್ಯ ಖಂಡಗಳ ಅಧಿನಿಯಮ, 1899ರ (1899ರ [1][ಕರ್ನಾಟಕ ಅಧಿನಿಯಮ][1] III) 6 ನೇ ಪ್ರಕರಣವು, ಸದರಿ ಅಧಿನಿಯಮಗಳ ನಿರಸನದ ಸಂಬಂಧದಲ್ಲಿ ಅನ್ವಯವಾಗತಕ್ಕದ್ದು ಮತ್ತು ಸದರಿ ಅಧಿನಿಯಮದ 8 ಮತ್ತು 24ನೇ ಪ್ರಕರಣಗಳು ನಿರಸಿತ ಅಧಿನಿಯಮಿತಿಗಳನ್ನು ಈ ಅಧಿನಿಯಮದ ಮೂಲಕ ಪುನರ್ ಅಧಿನಿಯಮಿತಗೊಳಿಸಲಾಗಿದ್ದರೆ ಹೇಗೋ ಹಾಗೆ ಅನ್ವಯವಾಗತಕ್ಕದ್ದು.

**ಅನುಸೂಚಿ**

[2(ಸಿ) ಪ್ರಕರಣ ನೋಡಿ]

(ಈ ಅಧಿನಿಯಮ ಅನ್ವಯವಾಗುವ ಸರಕುಗಳು)

I. ನಾರಿನ ಪದಾರ್ಥಗಳು,-
  (1) ಬೀಜ ತೆಗೆದ ಮತ್ತು ಬೀಜ ತೆಗೆಯದ ಹತ್ತಿ
  (2) ಸೆಣಬು
  (3) ಕತ್ತಾಳೆ, ತೆಂಗಿನ ನಾರು ಮತ್ತು ಅದರ ಉತ್ಪನ್ನಗಳು
II. ಧಾನ್ಯಗಳು
III. ಬೇಳೆ ಕಾಳುಗಳು
IV. ಕೊಬ್ಬರಿಯೂ ಸೇರಿದಂತೆ ಎಣ್ಣೆಬೀಜ ಮತ್ತು ಅವುಗಳ ಉತ್ಪನ್ನಗಳು
V. ಗೋಡಂಬಿ, ತೆಂಗಿನ ಕಾಯಿ
VI. ಬೆಲ್ಲ, ಸಕ್ಕರೆ ಮತ್ತು ಖಂಡಸಾರಿ
VII. ಹಣ್ಣುಗಳು
VIII. ತರಕಾರಿ, ಆಲೂಗೆಡ್ಡೆ, ಈರುಳ್ಳಿ
IX. ಪಶು ಸಂಗೋಪನಾ ಉತ್ಪನ್ನಗಳು,-
  (1) ಉಣ್ಣೆ (2) ಬೆಣ್ಣೆ (3) ತುಪ್ಪ (4) ಹಾಲು (5) ಮೊಟ್ಟೆಗಳು
X. ಮೀನು
XI. ಮಸಾಲೆ ಪದಾರ್ಥಗಳು, ಸಂಬಾರ ದಿನಸಿಗಳು, ಮೊದಲಾದವು,-
  (1) ಕೊತ್ತಂಬರಿ ಬೀಜ (2) ಮೆಣಸಿನ ಕಾಯಿ (3) ಅರಿಶಿಣ (4) ಬೆಳ್ಳುಳ್ಳಿ (5) ಶುಂಠಿ
  (6) ಜೀರಿಗೆ (7) ಹುಣಸೇಹಣ್ಣು (8) ಏಲಕ್ಕಿ (9) ಕಾಳು ಮೆಣಸು (10) ಸೀಗೆಕಾಯಿ
  (11) ಅಡಿಕೆ (12) ಕಾಫಿಬೀಜ
XII. ಪಶು ಆಹಾರ
XIII. ತಂಬಾಕು
XIV. ರಸಗೊಬ್ಬರಗಳು.

**ಅಧಿಸೂಚನೆ**

**ಬೆಂಗಳೂರು, 1969ರ ಆಗಸ್ಟ್ 6ನೇ ದಿನಾಂಕ [ಸಂ ಡಿಪಿಸಿ 49 ಸಿಡಬ್ಲ್ಯೂಎಚ್ 69]**

**ಎಸ್.ಓ.1683.-** ಮೈಸೂರು ಉಗ್ರಾಣಗಳ ಅಧಿನಿಯಮ, 1961ರ (1962ರ ಮೈಸೂರು ಅಧಿನಿಯಮ ಸಂಖ್ಯೆ 11) 1ನೇ ಪ್ರಕರಣದ (3) ನೇ ಉಪಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಮೈಸೂರು ಸರ್ಕಾರವು, ಈ ಮೂಲಕ, 1969ನೇ ಸೆಪ್ಟೆಂಬರ್ 1ನೇ ದಿನಾಂಕವನ್ನು ಸದರಿ ಅಧಿನಿಯಮವು ಜಾರಿಗೆ ಬರತಕ್ಕ ದಿನಾಂಕವೆಂದು ಗೊತ್ತುಪಡಿಸುತ್ತದೆ.

ಮೈಸೂರು ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಜೆ. ಗೋರೆಪೀರ್‌ಜಾದೆ**

ಸರ್ಕಾರದ ಉಪ ಕಾರ್ಯದರ್ಶಿ.

(1969ರ ಆಗಸ್ಟ್ 14ನೇ ದಿನಾಂಕದ ಕರ್ನಾಟಕ ರಾಜ್ಯಪತ್ರದ ಭಾಗ-iv 2ಸಿ (ii) ನಲ್ಲಿ ಪ್ರಕಟಿಸಲಾಗಿದೆ-ಪುಟ ಸಂಖ್ಯೆ 4048)

1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ, 1973ರ ಮೂಲಕ 1.11.1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

# ಕರ್ನಾಟಕ ಉಗ್ರಾಣಗಳ ನಿಯಮಗಳು, 1969

## ನಿಯಮಗಳ ಅನುಕ್ರಮಣಿಕೆ

ನಿಯಮಗಳು:

### ಅಧ್ಯಾಯ - I

### ಪ್ರಾರಂಭಿಕ



### ಅಧ್ಯಾಯ-II

### ಲೈಸೆನ್ಸ್



### ಅಧ್ಯಾಯ - III

### ಸರಕುಗಳ ದಾಸ್ತಾನು ಮತ್ತು ನಿರ್ವಹಣೆ, ಇತ್ಯಾದಿ

21. ಉಗ್ರಾಣ ಪಾಲಕನು ನಷ್ಟ ಅಥವಾ ಹಾನಿಯ ಬಗ್ಗೆ ವರದಿ ಮಾಡುವುದು

22. ಸರಕುಗಳ ವರ್ಗೀಕರಣ

23. ಸರಕುಗಳಿಗೆ ಉಂಟಾದ ನಷ್ಟ ಅಥವಾ ಹಾನಿಯ ಬಗ್ಗೆ ನೋಟೀಸು

24. ಸರಕುಗಳನ್ನು ಭಾಗಶಃ ಹಿಂದಿರುಗಿಸುವುದು

25. ಪುಸ್ತಕಗಳು, ದಾಖಲೆಗಳು, ಇತ್ಯಾದಿಗಳನ್ನು ಇಟ್ಟುಕೊಂಡು ಬರುವುದು

26. ಕೊರತೆ ಅಥವಾ ಹೆಚ್ಚುವರಿಯ ಬಗ್ಗೆ ವಿವಾದ

27. ಉಗ್ರಾಣದಲ್ಲಿ ಹಾಳಾಗುತ್ತಿರುವ ಅಥವಾ ಹಾಳಾಗಲು ಆರಂಭವಾಗಿರುವ ಸರಕುಗಳ ಹರಾಜು ಮಾರಾಟ

28. ಹರಾಜು ಮಾರಾಟದ ಹುಟ್ಟುವಳಿಯ ಬಗ್ಗೆ ಲೆಕ್ಕ ಇಡುವುದು

29. ಉಗ್ರಾಣ ಪಾಲಕನು ಸರಕುಗಳನ್ನು ಸ್ಥಳಾಂತರಿಸುವುದು ಅಥವಾ ವರ್ಗಾವಣೆ ಮಾಡುವುದು

## ಅಧ್ಯಾಯ-IV

## ತೂಕ ಮಾಡುವವರು, ಮಾದರಿಗಳ ಪರೀಕ್ಷಕರು ಮತ್ತು ಶ್ರೇಣಿಕಾರರು

30. ತೂಕ ಮಾಡುವವರು, ಮಾದರಿಗಳ ಪರೀಕ್ಷಕರು ಮತ್ತು ಶ್ರೇಣಿಕಾರರಿಂದ ಲೈಸೆನ್ಸಿಗಾಗಿ ಅರ್ಜಿ

31. ತೂಕ ಮಾಡುವವರು, ಮಾದರಿಗಳ ಪರೀಕ್ಷಕರು ಮತ್ತು ಶ್ರೇಣಿಕಾರರಿಗೆ ಮಂಜೂರು ಮಾಡಿದ ಲೈಸೆನ್ಸುಗಳ ಅವಧಿ

32. ತೂಕ ಮಾಡುವವರು, ಮಾದರಿಗಳ ಪರೀಕ್ಷಕರು ಅಥವಾ ಶ್ರೇಣಿಕಾರರಿಗೆ ನೀಡಬೇಕಾದ ಪ್ರಮಾಣ ಪತ್ರ

33. ತೂಕ ಮಾಡುವವರ, ಮಾದರಿಗಳ ಪರೀಕ್ಷಕರ ಮತ್ತು ಶ್ರೇಣಿಕಾರರ ಲೈಸೆನ್ಸುಗಳ ನವೀಕರಣ

34. ತೂಕ ಮಾಡುವವರಿಗೆ, ಮಾದರಿಗಳ ಪರೀಕ್ಷಕರಿಗೆ ಮತ್ತು ಶ್ರೇಣಿಕಾರರಿಗೆ ದ್ವಿಪ್ರತಿ ಲೈಸೆನ್ಸ್ ನೀಡಿಕೆಗೆ ಶುಲ್ಕ

35. ತೂಕ ಮಾಡುವವರ, ಮಾದರಿಗಳ ಪರೀಕ್ಷಕರ ಮತ್ತು ಶ್ರೇಣಿಕಾರರ ಲೈಸೆನ್ಸನ್ನು ಅಮಾನತುಗೊಳಿಸುವುದು ಅಥವಾ ರದ್ದುಗೊಳಿಸುವುದು

36. ಉಗ್ರಾಣಪಾಲಕನು ಯಾವ ಸಂದರ್ಭದಲ್ಲಿ ಸರಕುಗಳ ತೂಕ, ದರ್ಜೆ ಅಥವಾ ವರ್ಗವನ್ನು ನಿರ್ಧರಿಸಬಹುದು

37. ಅಪೀಲನ್ನು ಯಾವ ಪ್ರಾಧಿಕಾರಕ್ಕೆ ಸಲ್ಲಿಸಬೇಕು

38. ನೋಟೀಸುಗಳನ್ನು ನೀಡುವ ರೀತಿ

39. ಉಗ್ರಾಣಪಾಲಕನು ಮಾನಕ ತೂಕ ಮತ್ತು ಅಳತೆಯನ್ನು ಬಳಸುವುದು

40. ಉಗ್ರಾಣಗಳ ವ್ಯವಹಾರದ ವೇಳೆ

41. ಉಗ್ರಾಣ ಪಾಲಕನು ವರದಿಗಳನ್ನು ಒದಗಿಸುವುದು

ನಮೂನೆ ಸಂಖ್ಯೆ 1 ರಿಂದ 12 ರವರೆಗೆ

## ಅಭಿವೃದ್ಧಿ, ವಸತಿ, ಪಂಚಾಯತ್ ರಾಜ್ ಮತ್ತು ಸಹಕಾರ ಸಚಿವಾಲಯ

### ಅಧಿಸೂಚನೆ

**ಬೆಂಗಳೂರು, ದಿನಾಂಕ 26ನೇ ಜೂನ್ 1969**

ಜಿ.ಎಸ್.ಆರ್. **241.-** ಕರ್ನಾಟಕ ಉಗ್ರಾಣಗಳ ಅಧಿನಿಯಮ, 1961ರ (1962ರ ಕರ್ನಾಟಕ ಅಧಿನಿಯಮ ಸಂ11) 34ನೇ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತದೆ. ಸದರಿ ಅಧಿನಿಯಮದ 34ನೇ ಪ್ರಕರಣದ (1)ನೇ ಉಪ ಪ್ರಕರಣದ ಮೂಲಕ ಅಗತ್ಯಪಡಿಸಲಾದಂತೆ, ಅದರ ಕರಡನ್ನು 1965ರ ಜುಲೈ 8ನೇ ದಿನಾಂಕದ ಕರ್ನಾಟಕ ರಾಜ್ಯಪತ್ರದ ಭಾಗ -IV ಪ್ರಕರಣ 2 ಸಿ (i) ರಲ್ಲಿ ಪ್ರಕಟವಾದ ಅಧಿಸೂಚನೆ ಸಂ. ಜಿಎಸ್‌ಆರ್ 574 ರಲ್ಲಿ (ಡಿಪಿಸಿ 2 ಸಿಡಬ್ಲ್ಯೂಎಚ್ 64, ದಿನಾಂಕ 9ನೇ ಮಾರ್ಚ್ 1965) ಈ ಹಿಂದೆ ಪ್ರಕಟಿಸಲಾಗಿದೆ, ಎಂದರೆ,-

### ಅಧ್ಯಾಯ - I

### ಪ್ರಾರಂಭಿಕ

**1. ಹೆಸರು.-** (1) ಈ ನಿಯಮಗಳನ್ನು ಕರ್ನಾಟಕ ಉಗ್ರಾಣಗಳ ನಿಯಮಗಳು, 1969 ಎಂದು ಕರೆಯತಕ್ಕದ್ದು.

(2) ಅವು ಇಡೀ ಕರ್ನಾಟಕ ರಾಜ್ಯಕ್ಕೆ ವ್ಯಾಪ್ತವಾಗತಕ್ಕದ್ದು.

**2. ಪರಿಭಾಷೆಗಳು.-** ಈ ನಿಯಮಗಳಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,-

(1) "ಅಧಿನಿಯಮ" ಎಂದರೆ ಕರ್ನಾಟಕ ಉಗ್ರಾಣಗಳ ಅಧಿನಿಯಮ, 1961;

(2) "ನಮೂನೆ" ಎಂದರೆ ಈ ನಿಯಮಗಳಿಗೆ ಅನುಬಂಧಿಸಿದ ನಮೂನೆ;

(3) "ಶ್ರೇಣಿಕಾರ" ಎಂದರೆ ಸರಕುಗಳನ್ನು ಶ್ರೇಣೀಕರಿಸಲು ಅಥವಾ ಇನ್ನಾವುದೇ ರೀತಿಯಲ್ಲಿ ವರ್ಗೀಕರಿಸಲು ಮತ್ತು ಪ್ರಮಾಣ ಪತ್ರ ನೀಡಲು ಈ ಅಧಿನಿಯಮದ ಅಡಿಯಲ್ಲಿ ಲೈಸೆನ್ಸ್ ಪಡೆದಿರುವ ಒಬ್ಬ ವ್ಯಕ್ತಿ;

(4) "ಲೈಸೆನ್ಸ್" ಎಂದರೆ ಈ ಅಧಿನಿಯಮದ ಅಡಿಯಲ್ಲಿ ನಿಯಮಿಸಲಾದ ಪ್ರಾಧಿಕಾರವು ನೀಡಿರುವ ಲೈಸೆನ್ಸ್;

(5) "ವರ್ಗಾವಣೀಯ ರಸೀದಿ" ಎಂದರೆ ಯಾವ ರಸೀದಿಯಲ್ಲಿ ನಿರ್ದಿಷ್ಟಪಡಿಸಿರುವ ಸರಕುಗಳನ್ನು ಧಾರಕನಿಗೆ ಅಥವಾ ಅದರಲ್ಲಿ ಹೆಸರಿಸಲ್ಪಟ್ಟವನು ಆದೇಶಿಸಿದ ವ್ಯಕ್ತಿಗೆ ಕೊಡಲಾಗುವುದೆಂದು ಅದರಲ್ಲಿ ಹೇಳಲಾಗಿದೆಯೋ ಆ ರಸೀದಿ;

(6) "ವರ್ಗಾವಣೀಯವಲ್ಲದ ರಸೀದಿ" ಎಂದರೆ ಯಾವ ರಸೀದಿಯಲ್ಲಿ, ನಿರ್ದಿಷ್ಟಪಡಿಸಲಾಗಿರುವ ಸರಕುಗಳನ್ನು ಉಗ್ರಾಣಗಳಲ್ಲಿ ದಾಸ್ತಾನು ಮಾಡಲು ಉಗ್ರಾಣ ಪಾಲಕನಿಗೆ ನೀಡಿದಂಥ ವ್ಯಕ್ತಿಗೆ ಆ ಸರಕುಗಳನ್ನು ಕೊಡಲಾಗುವುದೆಂದು ಅದರಲ್ಲಿ ಹೇಳಲಾಗಿದೆಯೋ ಆ ರಸೀದಿ;

(7) [1]["ನಿಯಮಿಸಲಾದ ಪ್ರಾಧಿಕಾರ" ಎಂದರೆ ಕರ್ನಾಟಕ ಕೃಷಿ ಮಾರುಕಟ್ಟೆಯ ಹೆಚ್ಚುವರಿ ನಿರ್ದೇಶಕ, ಬೆಂಗಳೂರು;][1]

(8) **"ಮಾದರಿಗಳ ಪರೀಕ್ಷಕ"** ಎಂದರೆ ಸರಕುಗಳ ಮಾದರಿಯನ್ನು ಪರೀಕ್ಷಿಸಲು ಮತ್ತು ಆ ಬಗ್ಗೆ ಪ್ರಮಾಣಪತ್ರ ನೀಡಲು ಅಧಿನಿಯಮದ ಅಡಿಯಲ್ಲಿ ಲೈಸೆನ್ಸ್ ಪಡೆದಿರುವ ವ್ಯಕ್ತಿ;

(9) **"ಪ್ರಕರಣ"** ಎಂದರೆ ಈ ಅಧಿನಿಯಮದ ಒಂದು ಪ್ರಕರಣ;

(10) **"ತೂಕ ಮಾಡುವವನು"** ಎಂದರೆ ಸರಕುಗಳನ್ನು ತೂಕ ಮಾಡಲು ಮತ್ತು ತೂಕದ ಬಗ್ಗೆ ಪ್ರಮಾಣ ಪತ್ರ ನೀಡಲು ಈ ಅಧಿನಿಯಮದ ಅಡಿಯಲ್ಲಿ ಲೈಸೆನ್ಸ್ ಪಡೆದಿರುವ ಒಬ್ಬ ವ್ಯಕ್ತಿ;

(11) **"ವರ್ಷ"** ಎಂದರೆ ಏಪ್ರಿಲ್ ಮೊದಲನೇ ದಿನದಂದು ಪ್ರಾರಂಭವಾಗುವ ಮತ್ತು ಮುಂಬರುವ ಮಾರ್ಚ್ ಮೂವತ್ತೊಂದನೆಯ ದಿನದಂದು ಕೊನೆಗೊಳ್ಳುವ ಅಧಿಕೃತ ವರ್ಷ.

---

1. ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 39, ಡಬ್ಲ್ಯೂಎಚ್‌ಸಿ 89, ದಿನಾಂಕ 22 ನೇ ಸೆಪ್ಟೆಂಬರ್ 1990ರ ಮೂಲಕ ಪ್ರತಿಯೋಜಿಸಲಾಗಿದೆ.

## ಅಧ್ಯಾಯ-II

## ಲೈಸೆನ್ಸ್

**3. ಲೈಸೆನ್ಸುಗಳಿಗಾಗಿ ಅರ್ಜಿ.-** (1) 4ನೇ ಪ್ರಕರಣದ ಅಡಿಯಲ್ಲಿ ಲೈಸೆನ್ಸಿನ ಮಂಜೂರಾತಿಗಾಗಿ ಮತ್ತು 6ನೇ ಪ್ರಕರಣದ ಅಡಿಯಲ್ಲಿ ಅದರ ನವೀಕರಣಕ್ಕಾಗಿ ಅರ್ಜಿಯನ್ನು ನಮೂನೆ 1 ರಲ್ಲಿ ಮತ್ತು 11ನೇ ಪ್ರಕರಣದ ಅಡಿಯಲ್ಲಿ ದ್ವಿಪ್ರತಿ ಲೈಸೆನ್ಸಿನ ನೀಡಿಕೆಗಾಗಿ ಅರ್ಜಿಯನ್ನು ನಮೂನೆ 2 ರಲ್ಲಿ ನಿಯಮಿಸಲಾದ ಪ್ರಾಧಿಕಾರಕ್ಕೆ ಸಲ್ಲಿಸತಕ್ಕದ್ದು. ಅರ್ಜಿದಾರನು ಅರ್ಜಿಗೆ ಸಹಿ ಹಾಕತಕ್ಕದ್ದು ಮತ್ತು ಅವನು 5ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಲಾದ ಷರತ್ತುಗಳನ್ನು ಪಾಲಿಸಲಾಗಿದೆಯೇ ಎಂಬುದನ್ನು ಖಚಿತಪಡಿಸಿಕೊಳ್ಳುವ ಉದ್ದೇಶಕ್ಕಾಗಿ ನಿಯಮಿಸಲಾದ ಪ್ರಾಧಿಕಾರವು ಅಗತ್ಯಪಡಿಸಬಹುದಾದಂಥ ಹೆಚ್ಚಿನ ಮಾಹಿತಿಯನ್ನು ಒದಗಿಸತಕ್ಕದ್ದು.

(2) ಮೊದಲ ಸಲ ಲೈಸೆನ್ಸಿಗಾಗಿ ಅರ್ಜಿಯನ್ನು ವರ್ಷದ ಯಾವುದೇ ಸಮಯದಲ್ಲಿ ಸಲ್ಲಿಸತಕ್ಕದ್ದು ಮತ್ತು ಅದರ ಜೊತೆಗೆ 4ನೇ ನಿಯಮದಲ್ಲಿ ನಿರ್ದಿಷ್ಟಪಡಿಸಿದ ಫೀಜು ಇರತಕ್ಕದ್ದು. ಲೈಸೆನ್ಸಿನ ನವೀಕರಣದ ಅರ್ಜಿಯಲ್ಲಿ ಅಗತ್ಯಪಡಿಸಿರುವಂತೆ ವರ್ಷವು ಪ್ರಾರಂಭವಾಗುವುದಕ್ಕೆ ಕನಿಷ್ಠ ಪಕ್ಷ ಒಂದು ತಿಂಗಳ ಮೊದಲು ಸಲ್ಲಿಸತಕ್ಕದ್ದು ಮತ್ತು ಅದರ ಜೊತೆಗೆ 8ನೇ ನಿಯಮದಲ್ಲಿ ನಿರ್ದಿಷ್ಟಪಡಿಸಿದ ಫೀಜು ಇರತಕ್ಕದ್ದು.

(3) ಒಂದಕ್ಕಿಂತ ಹೆಚ್ಚು ಗ್ರಾಮ ಅಥವಾ ಪಟ್ಟಣದಲ್ಲಿ ಉಗ್ರಾಣಪಾಲಕನ ವ್ಯವಹಾರವನ್ನು ನಡೆಸಲು ಇಚ್ಛಿಸುವ ವ್ಯಕ್ತಿಯು, ಅಂಥ ಪ್ರತಿಯೊಂದು ಗ್ರಾಮ ಅಥವಾ ಪಟ್ಟಣದಲ್ಲಿ, ತನ್ನ ವ್ಯವಹಾರದ ಸಂಬಂಧದಲ್ಲಿ ಲೈಸೆನ್ಸ್‌ಗಳಿಗಾಗಿ ಪ್ರತ್ಯೇಕ ಅರ್ಜಿಗಳನ್ನು ಸಲ್ಲಿಸತಕ್ಕದ್ದು. ಒಂದೇ ಗ್ರಾಮ ಅಥವಾ ಪಟ್ಟಣದಲ್ಲಿ ಒಂದಕ್ಕಿಂತ ಹೆಚ್ಚು ವ್ಯವಹಾರ ಸ್ಥಳಗಳನ್ನು ಹೊಂದಿದ್ದ ಸಂದರ್ಭದಲ್ಲಿ, ಅವನು, ಅಂಥ ಎಲ್ಲ ವ್ಯವಹಾರದ ಸ್ಥಳಗಳಿಗೆ ಸಂಬಂಧಿಸಿದಂತೆ ಒಂದು ಲೈಸೆನ್ಸಿಗಾಗಿ ಮಾತ್ರ ಅರ್ಜಿ ಸಲ್ಲಿಸಬಹುದು ಮತ್ತು ಅವುಗಳ ಪೈಕಿ ತನ್ನ ಪ್ರಧಾನ ವ್ಯವಹಾರ ಸ್ಥಳ ಯಾವುದೆಂಬುದನ್ನು ನಿರ್ದಿಷ್ಟಪಡಿಸತಕ್ಕದ್ದು:

ಪರಂತು, ಕೃಷಿ ಉತ್ಪನ್ನ (ಅಭಿವೃದ್ಧಿ ಮತ್ತು ಉಗ್ರಾಣ ವ್ಯವಸ್ಥೆ) ನಿಗಮ ಅಧಿನಿಯಮ, 1956 ಅಥವಾ ಉಗ್ರಾಣ ನಿಗಮ ಅಧಿನಿಯಮ, 1962ರ ಅಡಿಯಲ್ಲಿ ಸ್ಥಾಪಿತವಾದ ನಿಗಮವು ನಡೆಸುತ್ತಿರುವ ಉಗ್ರಾಣಗಳ ಸಂದರ್ಭದಲ್ಲಿ, ಲೈಸೆನ್ಸ್ ಇರುವ ಉಗ್ರಾಣ ಕೇಂದ್ರದ ನಾಲ್ಕು ಮೈಲಿಗಳ ವ್ಯಾಪ್ತಿಯೊಳಗೆ ಅಥವಾ ಕೇಂದ್ರದ ಪುರಸಭಾ ಪರಿಮಿತಿಗಳ ವ್ಯಾಪ್ತಿಯೊಳಗೆ ತೆರೆದ ಗೋದಾಮುಗಳಿಗೆ ಯಾವುದೇ ಪ್ರತ್ಯೇಕ ಲೈಸೆನ್ಸಿನ ಅವಶ್ಯಕತೆ ಇರತಕ್ಕದ್ದಲ್ಲ.

**4. ಲೈಸೆನ್ಸ್ ಮಂಜೂರಾತಿಗಾಗಿ ಶುಲ್ಕದ ಶ್ರೇಣಿಗಳು.-** (1) ಉಗ್ರಾಣ ಪಾಲಕನು ತನ್ನ ವ್ಯವಹಾರವನ್ನು ನಡೆಸುವುದಕ್ಕಾಗಿ, 4ನೇ ಪ್ರಕರಣದ ಅಡಿಯಲ್ಲಿ ಲೈಸೆನ್ಸ್ ಮಂಜೂರು ಮಾಡಲು ಸಂದಾಯ ಮಾಡಬೇಕಾದ ವಾರ್ಷಿಕ ಫೀಜಿನ ಪ್ರಮಾಣವು ಈ ಮುಂದಿನಂತಿರತಕ್ಕದ್ದು:-

| | | |
|---|---|---|
| (i) | ಏಳುನೂರು ಘನ ಮೀಟರುಗಳವರೆಗೆ ಸ್ಥಳಾವಕಾಶ ಹೊಂದಿರುವ ಉಗ್ರಾಣಗಳು | ಮೂವತ್ತು ರೂಪಾಯಿಗಳು. |
| | ಮತ್ತು ಸ್ಥಳಾವಕಾಶದ ಪ್ರತಿಹೆಚ್ಚುವರಿ ಇಪ್ಪತ್ತೈದು ಘನ ಮೀಟರುಗಳು ಅಥವಾ ಅದರ ಭಾಗಕ್ಕೆ | ಒಂದು ರೂಪಾಯಿ. |
| (ii) | 11ನೇ ಪ್ರಕರಣದ ಅಡಿಯಲ್ಲಿ ದ್ವಿಪ್ರತಿ ಲೈಸೆನ್ಸ್‌ನ ಮಂಜೂರಾತಿಗಾಗಿ ಸಂದಾಯ ಮಾಡಬೇಕಾದ ಫೀಜು | ಐದು ರೂಪಾಯಿಗಳು. |

(2) ಲೈಸೆನ್ಸಿನ ಅವಧಿಯಲ್ಲಿ ಉಗ್ರಾಣದ ಸ್ಥಳಾವಕಾಶವು ಏಳುನೂರು ಘನ ಮೀಟರುಗಳನ್ನು ಮೀರುವಷ್ಟು ಹೆಚ್ಚಿದ್ದರೆ, ಲೈಸೆನ್ಸುದಾರನು, (1)ನೇ ಉಪ ನಿಯಮದಲ್ಲಿ ನಿರ್ದಿಷ್ಟಪಡಿಸಿದ ಹೆಚ್ಚುವರಿ ಶುಲ್ಕವನ್ನು ಸಂದಾಯ ಮಾಡತಕ್ಕದ್ದು.

**5. ಲೈಸೆನ್ಸಿನ ನಿಬಂಧನೆ.-** 5ನೇ ಪ್ರಕರಣದ ಅಡಿಯಲ್ಲಿ ಲೈಸೆನ್ಸನ್ನು ಈ ಮುಂದಿನ ಷರತ್ತುಗಳಿಗೊಳಪಟ್ಟು ಮಂಜೂರು ಮಾಡತಕ್ಕದ್ದು:-

(i) ಪ್ರತಿಯೊಬ್ಬ ಉಗ್ರಾಣ ಪಾಲಕನು, ಯಾವ ಉಗ್ರಾಣದ ಲೈಸೆನ್ಸಿಗೆ ಅರ್ಜಿ ಸಲ್ಲಿಸಲಾಗಿದೆಯೋ ಆ ಪ್ರತಿಯೊಂದು ಉಗ್ರಾಣದ ಸಂಬಂಧದಲ್ಲಿ, ಲೈಸೆನ್ಸ್ ಇರುವ ಉಗ್ರಾಣದ ಐದು ಘನ ಮೀಟರು ಸ್ಥಳಾವಕಾಶಕ್ಕೆ ಹತ್ತು ರೂಪಾಯಿಗಳ ದರದಲ್ಲಿ ಉಗ್ರಾಣವನ್ನು ನಡೆಸುವುದರಿಂದ ಉಂಟಾಗುವ ಯಾವುದೇ ಋಣದ ಸಂದಾಯಕ್ಕಾಗಿ ಹೊಣೆಯಾಗಿರುವ ನಿವ್ವಳ ಆಸ್ತಿಗಳನ್ನು ಹೊಂದಿರತಕ್ಕದ್ದು ಮತ್ತು ಅವುಗಳನ್ನು ನಿರ್ವಹಿಸತಕ್ಕದ್ದು. ಅಂಥ ಆಸ್ತಿಗಳು ಅಗತ್ಯವಿರುವ ಮೌಲ್ಯದ ಸ್ಥಿರ ಅಥವಾ

ಚರ ಸ್ವತ್ತನ್ನೂ ಸಹ ಒಳಗೊಂಡಿರಬಹುದು. ಅಂಥ ಆಸ್ತಿಗಳಲ್ಲಿ ಕಟ್ಟಡಗಳು, ಯಂತ್ರೋಪಕರಣಗಳು ಅಥವಾ ವಾಣಿಜ್ಯ ಸರಕುಗಳು ಸೇರಿದ್ದ ಸಂದರ್ಭದಲ್ಲಿ, ಉಗ್ರಾಣ ಪಾಲಕನು, ಬೆಂಕಿಯಿಂದ ಉಂಟಾಗುವ ನಷ್ಟ ಅಥವಾ ಹಾನಿಯ ವಿರುದ್ಧ ನಿಯಮಿಸಲಾದ ಪ್ರಾಧಿಕಾರವು ಅನುಮೋದಿಸಿದ ಕಂಪನಿ ಅಥವಾ ಕಂಪನಿಗಳಲ್ಲಿ ವಿಮೆ ಮಾಡಿಸತಕ್ಕದ್ದು;

(ii) ಲೈಸೆನ್ಸನ್ನು ಸ್ವೀಕರಿಸಿದ ತರುವಾಯ, ಕೂಡಲೇ ಸರಕು ದಾಸ್ತಾನುದಾರರಿಗೆ ಉಗ್ರಾಣಪಾಲಕನು ಸ್ವೀಕೃತಿಗಳನ್ನು ನೀಡಲಾಗುವ ಪ್ರಧಾನ ಕಚೇರಿಯಲ್ಲಿಯ ಎದ್ದುಕಾಣುವ ಜಾಗದಲ್ಲಿ ಅದನ್ನು ಅಂಟಿಸತಕ್ಕದ್ದು ಮತ್ತು ಅದನ್ನು ಅಮಾನತು ಗೊಳಿಸುವವರೆಗೆ ಅಥವಾ ಹಿಂತೆಗೆದುಕೊಳ್ಳುವವರೆಗೆ ಅಂಟಿಸಿರತಕ್ಕದ್ದು;

(iii) 8ನೇ ಪ್ರಕರಣದ (1)ನೇ ಉಪ ಪ್ರಕರಣದ (ಸಿ) ಅಥವಾ (ಇ) ಖಂಡಗಳಲ್ಲಿ ನಮೂದಿಸಿದ ಯಾವುವೇ ಸಂದರ್ಭಗಳು ಉಂಟಾದಾಗಲೆಲ್ಲಾ, ಉಗ್ರಾಣಪಾಲಕನು, ತನ್ನ ಸಾಮರ್ಥ್ಯವಿರುವಷ್ಟು ಮಟ್ಟಿಗೆ ಲೈಸೆನ್ಸ್ ಮಂಜೂರು ಮಾಡುವ ಪ್ರಾಧಿಕಾರಿಗೆ ಸಂದರ್ಭಗಳನ್ನು ಕೂಡಲೇ ಅಧಿಸೂಚಿಸುವುದು ಅವನ ಕರ್ತವ್ಯವಾಗಿರತಕ್ಕದ್ದು;

(iv) ಪ್ರತಿಯೊಬ್ಬ ಉಗ್ರಾಣ ಪಾಲಕನು, ಲೈಸೆನ್ಸ್ ಇರುವ ಉಗ್ರಾಣವನ್ನು, ಅದರ ಯಂತ್ರೋಪಕರಣಗಳು ಮತ್ತು ಸಲಕರಣೆಗಳನ್ನು, ಅದರಲ್ಲಿ ದಾಸ್ತಾನು ಮಾಡಿರುವ ಸಾಮಗ್ರಿಗಳನ್ನು ಮತ್ತು ಅವುಗಳಿಗೆ ಸಂಬಂಧಪಟ್ಟ ಲೆಕ್ಕದ ಪುಸ್ತಕಗಳು ಮತ್ತು ದಾಖಲೆಗಳನ್ನು ಸಾಮಾನ್ಯ ವ್ಯವಹಾರದ ವೇಳೆಗಳಲ್ಲಿ ತಪಾಸಿಸಲು ಮತ್ತು ಪರೀಕ್ಷಿಸಲು, ನಿಯಮಿಸಲಾದ ಪ್ರಾಧಿಕಾರಕ್ಕೆ ಅಥವಾ ಅದು ನಿಯೋಜಿಸಿದ ಯಾರೇ ಅಧಿಕಾರಿಗೆ ಅನುಮತಿ ನೀಡತಕ್ಕದ್ದು ಮತ್ತು ಸೌಕರ್ಯಗಳನ್ನು ಒದಗಿಸತಕ್ಕದ್ದು.

**6. ಲೈಸೆನ್ಸಿನ ಅವಧಿ.–** 5ನೇ ನಿಯಮದ ಅಡಿಯಲ್ಲಿ ಮಂಜೂರು ಮಾಡಲಾದ ಲೈಸೆನ್ಸು, ಅದನ್ನು ನೀಡಿದಂಥ ದಿನಾಂಕದಿಂದ ಜಾರಿಗೆ ಬರುವಂತೆ, ಮುಂದಿನ ಮಾರ್ಚ್ 31ರಂದು ಅಂತ್ಯಗೊಳ್ಳುವ ಅವಧಿಯವರೆಗೆ ಸಿಂಧುವಾಗಿರತಕ್ಕದ್ದು.

**7. ಭದ್ರತೆ.–** 5ನೇ ಪ್ರಕರಣದ (1)ನೇ ಉಪ ಪ್ರಕರಣದ (ಬಿ) ಖಂಡದ ಪರಂತುಕದಲ್ಲಿ ಉಲ್ಲೇಖಿಸಲಾದ ನಿಗಮವನ್ನು ಹೊರತುಪಡಿಸಿ, ಪ್ರತಿಯೊಬ್ಬ ಉಗ್ರಾಣ ಪಾಲಕನು, ಲೈಸೆನ್ಸಿಗಾಗಿ ಅರ್ಜಿ ಸಲ್ಲಿಸುವ ಸಮಯದಲ್ಲಿ,-

(ಎ) ಪ್ರತಿ ಮೂರು ಘನ ಮೀಟರುಗಳಷ್ಟು ದಾಸ್ತಾನು ಸಾಮರ್ಥ್ಯಕ್ಕೆ ಐದು ರೂಪಾಯಿಗಳ ದರದಲ್ಲಿ ನಿರ್ಧರಣೆ ಮಾಡಲಾದಂತೆ ಕನಿಷ್ಠ ಒಂದು ಸಾವಿರ ರೂಪಾಯಿಗಳಿಗೊಳಪಟ್ಟು ಭದ್ರತಾ ಠೇವಣಿಯನ್ನು, ನಗದು ರೂಪದಲ್ಲಿ ಅಥವಾ ಸರ್ಕಾರದ ಭದ್ರತೆಗಳ ರೂಪದಲ್ಲಿ ನಿಯಮಿಸಲಾದ ಪ್ರಾಧಿಕಾರಿಗೆ ಒದಗಿಸತಕ್ಕದ್ದು ಮತ್ತು ಅವನು ಉಗ್ರಾಣ ಪಾಲಕನಾಗಿ ತನ್ನ ವ್ಯವಹಾರ ನಿರ್ವಹಿಸುವ ಸಂದರ್ಭದಲ್ಲಿ ಉದ್ಭವಿಸುವ ಷರತ್ತುಗಳ ಮತ್ತು ಬಾಧ್ಯತೆಗಳ ಪಾಲನೆಗೆ ಸಂಬಂಧಿಸಿದಂತೆ ನಮೂನೆ ಸಂ.3ರಲ್ಲಿ ಒಂದು ಬಂಧ ಪತ್ರವನ್ನು ಬರೆದುಕೊಡತಕ್ಕದ್ದು; ಅಥವಾ

(ಬಿ) ಅಷ್ಟೇ ಮೊಬಲಗಿಗೆ, ನಿಯಮಿಸಲಾದ ಪ್ರಾಧಿಕಾರಿಗೆ ತೃಪ್ತಿಯಾಗುವಂತೆ ಇಬ್ಬರು ಜಾಮೀನುದಾರರೊಂದಿಗೆ ಒಂದು ಬಂಧಪತ್ರವನ್ನು ಬರೆದುಕೊಡತಕ್ಕದ್ದು.

**8. ಲೈಸೆನ್ಸಿನ ನವೀಕರಣಕ್ಕೆ ಮತ್ತು ನೀಡಿಕೆಗೆ ಫೀಜು.–** 6ನೇ ಪ್ರಕರಣದ ಅಡಿಯಲ್ಲಿ ಲೈಸೆನ್ಸಿನ ನವೀಕರಣಕ್ಕೆ ಇರುವ ಫೀಜು 4ನೇ ನಿಯಮದಲ್ಲಿ ನಿರ್ದಿಷ್ಟಪಡಿಸಲಾದ ಲೈಸೆನ್ಸಿನ ಮಂಜೂರಾತಿಗಾಗಿ ಸಂದಾಯ ಮಾಡಬೇಕಾದುದಷ್ಟೇ ಆಗಿರತಕ್ಕದ್ದು.

**9. ಲೈಸೆನ್ಸುಗಳ ನವೀಕರಣ ಮತ್ತು ದ್ವಿಪ್ರತಿ ನೀಡಿಕೆ.–** ಲೈಸೆನ್ಸಿನ ನವೀಕರಣದ ಅಥವಾ ದ್ವಿಪ್ರತಿ ನೀಡಿಕೆಯ ಷರತ್ತುಗಳು, ಲೈಸೆನ್ಸಿನ ಮಂಜೂರಾತಿಗಾಗಿ ನಿಯಮಿಸಲಾದಂಥವೇ ಆಗಿರತಕ್ಕದ್ದು. ಅರ್ಜಿದಾರನು ಕಳೆದುಕೊಂಡ ಲೈಸೆನ್ಸನ್ನು ಯಾರೇ ವ್ಯಕ್ತಿಯು ಬಳಸುವುದರಿಂದ ಉಂಟಾಗಬಹುದಾದ ಯಾವುದೇ ನಷ್ಟ ಅಥವಾ ಹಾನಿಯ ವಿರುದ್ಧ ಸರ್ಕಾರಕ್ಕೆ ನಷ್ಟ ಭರ್ತಿ ಮಾಡಿಕೊಡುವುದಾಗಿ ಅರ್ಜಿದಾರನು ನಷ್ಟ ಭರ್ತಿ ಬಂಧಪತ್ರ ಬರೆದುಕೊಟ್ಟ ಮೇಲೆ ದ್ವಿಪ್ರತಿ ಲೈಸೆನ್ಸನ್ನು ಮಂಜೂರು ಮಾಡತಕ್ಕದ್ದು ಮತ್ತು ಅದರ ಮೇಲ್ಭಾಗದಲ್ಲಿ ಅದನ್ನು ಯಾವುದರ ಬದಲಾಗಿ ನೀಡಲಾಗಿದೆಯೋ ಆ ಮೂಲ ಲೈಸೆನ್ಸಿನ ಸಂಖ್ಯೆ ಮತ್ತು ದಿನಾಂಕ ಇರತಕ್ಕದ್ದು ಮತ್ತು "ದ್ವಿಪ್ರತಿ" ಎಂದು ಮುದ್ರೆ ಹಾಕಿರತಕ್ಕದ್ದು.

**10. ಲೈಸೆನ್ಸುಗಳ ಮಂಜೂರಾತಿ, ಅಮಾನತು ಅಥವಾ ರದ್ದಿಯಾತಿ ಮತ್ತು ಉಗ್ರಾಣ ಪಾಲಕರ ಹಾಗೂ ಅವರ ಉಗ್ರಾಣಗಳ ಪಟ್ಟಿಯ ಪ್ರಕಟಣೆ.–** ಉಗ್ರಾಣಗಳ ಹೆಸರುಗಳು ಮತ್ತು ಅವು ಇರುವ ಸ್ಥಳಗಳು ಮತ್ತು ಪ್ರತಿವರ್ಷ ಏಪ್ರಿಲ್ ಮೊದಲ ದಿನದಂದು ಇರುವಂತೆ ಈ ಅಧಿನಿಯಮದ ಅಡಿಯಲ್ಲಿ ಲೈಸೆನ್ಸ್ ಪಡೆದ ಉಗ್ರಾಣ ಪಾಲಕರ ಹೆಸರುಗಳು ಮತ್ತು ವಿಳಾಸಗಳನ್ನು ಕರ್ನಾಟಕ ರಾಜ್ಯಪತ್ರದಲ್ಲಿ ಅದೇ ವರ್ಷದ ಮೇ ಹದಿನೈದರ ಒಳಗಾಗಿ ಪ್ರಕಟಿಸತಕ್ಕದ್ದು. ಯಾವುದೇ ಲೈಸೆನ್ಸಿನ ತರುವಾಯದ ಅಮಾನತು ಅಥವಾ ರದ್ದಿಯಾತಿಯನ್ನು ಸಹ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸತಕ್ಕದ್ದು.

## ಅಧ್ಯಾಯ - III

### ಸರಕುಗಳ ದಾಸ್ತಾನು ಮತ್ತು ನಿರ್ವಹಣೆ, ಇತ್ಯಾದಿ

**11. ಸರಕುಗಳನ್ನು ದಾಸ್ತಾನು ಇಟ್ಟುಕೊಳ್ಳಲು ಮತ್ತು ಹಿಂದಕ್ಕೆ ನೀಡಲು ಉಗ್ರಾಣಪಾಲಕನಿಗೆ ಅರ್ಜಿ.–** ಸರಕುಗಳನ್ನು ದಾಸ್ತಾನು ಇಟ್ಟುಕೊಳ್ಳಲು ಒಬ್ಬ ಉಗ್ರಾಣಪಾಲಕನಿಗೆ ನಮೂನೆ ಸಂ.4 ರಲ್ಲಿ ಅರ್ಜಿಯನ್ನು ಸಲ್ಲಿಸತಕ್ಕದ್ದು ಮತ್ತು ಸರಕುಗಳನ್ನು ಹಿಂದಕ್ಕೆ ಪಡೆಯಲು ನಮೂನೆ ಸಂ. 5ರಲ್ಲಿ ಅರ್ಜಿಯನ್ನು ಸಲ್ಲಿಸತಕ್ಕದ್ದು.

**12. ರಶೀದಿಗಳು.–** ರಸೀದಿಗಳು ನಮೂನೆ ಸಂ. 6 ರಲ್ಲಿರತಕ್ಕದ್ದು ಮತ್ತು ಈ ಮುಂದಿನ ವಿವರಗಳನ್ನು ನಿರ್ದಿಷ್ಟಪಡಿಸತಕ್ಕದ್ದು:–

(i) ಸರಕುಗಳನ್ನು ಶೇಖರಿಸಿಡಲು ಒಪ್ಪಿದ ಅವಧಿ;

(ii) ರಸೀದಿಯಲ್ಲಿ ನಮೂದಿಸಿರುವ ಸರಕುಗಳ ಮಾಲೀಕತ್ವ ಮತ್ತು ಧಾರಣಾಧಿಕಾರಗಳು, ಅಡಮಾನಗಳು ಅಥವಾ ಅದರ ಮೇಲಿನ ಇತರ ಋಣಭಾರಗಳನ್ನು ತೋರಿಸುವ ವಿವರಗಳು.

**13. ರಶೀದಿಗಳಿಗೆ ಸಹಿ ಮಾಡಲು ಅಧಿಕಾರ ಹೊಂದಿರುವ ವ್ಯಕ್ತಿಗಳ ಬಗ್ಗೆ ಮಾಹಿತಿ.–** ಉಗ್ರಾಣಪಾಲಕನ ಪರವಾಗಿ ರಸೀದಿಗಳಿಗೆ ಸಹಿ ಹಾಕಲು ಅಧಿಕಾರ ಹೊಂದಿದ ವ್ಯಕ್ತಿಗಳ ಸಹಿಗಳೊಂದಿಗೆ ಅವರ ಹೆಸರುಗಳು ಮತ್ತು ಅವರ ವಿಳಾಸಗಳ ಬಗ್ಗೆ ಮಾಹಿತಿಯನ್ನು ಪ್ರತಿಯೊಬ್ಬ ಉಗ್ರಾಣ ಪಾಲಕನು ನಿಯಮಿಸಲಾದ ಪ್ರಾಧಿಕಾರಿಯ ಕಚೇರಿಯಲ್ಲಿ ದಾಖಲಿಸತಕ್ಕದ್ದು ಮತ್ತು ಅದರಲ್ಲಿ ಯಾವುದೇ ಬದಲಾವಣೆಯಾದಲ್ಲಿ, ಅವುಗಳನ್ನು ಕೂಡಲೇ ನಿಯಮಿಸಲಾದ ಪ್ರಾಧಿಕಾರಿಗೆ ತಿಳಿಸತಕ್ಕದ್ದು. ಹೊಸ ವ್ಯಕ್ತಿಗಳಿಗೆ ಅಧಿಕಾರ ನೀಡಿದರೆ, ಅವರ ಬಗ್ಗೆ ಸಹ ಮಾಹಿತಿಯನ್ನು ಒದಗಿಸತಕ್ಕದ್ದು.

**14. ವರ್ಗಾವಣೀಯವಲ್ಲದ ರಶೀದಿಗಳು.–** ವರ್ಗಾವಣೀಯವಲ್ಲದ ರಸೀದಿಗಳನ್ನು ನೀಡುವ ಪ್ರತಿಯೊಬ್ಬ ಉಗ್ರಾಣಪಾಲಕನು, ಅದರ ಮೇಲೆ "ವರ್ಗಾವಣೀಯವಲ್ಲದುದು" ಎಂಬ ಪದವನ್ನು ಗುರುತು ಮಾಡಿಸತಕ್ಕದ್ದು.

**15. ರಶೀದಿಗಳ ದ್ವಿಪ್ರತಿ ನೀಡಿಕೆ.–** (1) ಮೂಲ ಪ್ರತಿ ಕಳೆದುಹೋಗಿದ್ದರೆ ಅಥವಾ ನಾಶವಾಗಿದ್ದರೆ, ರಸೀದಿಯ ದ್ವಿಪ್ರತಿಯನ್ನು ನೀಡುವಂತೆ ಸರಕು ದಾಸ್ತಾನುದಾರನು ಉಗ್ರಾಣಪಾಲಕನಿಗೆ ಒಂದು ಅರ್ಜಿ ಸಲ್ಲಿಸತಕ್ಕದ್ದು ಮತ್ತು ಅದಕ್ಕೆ ಮುಂದಿನವುಗಳನ್ನು ಲಗತ್ತಿಸಿರತಕ್ಕದ್ದು,-

(ಎ) ಅರ್ಜಿದಾರನು, ಮೂಲ ರಸೀದಿಯನ್ನು ಸ್ವಾಧೀನದಲ್ಲಿಟ್ಟುಕೊಳ್ಳಲು ಕಾನೂನು ಬದ್ಧವಾಗಿ ಹಕ್ಕುಳ್ಳವನೆಂದು ಅದನ್ನು ವರ್ಗಾವಣೆ ಮಾಡಿಲ್ಲ ಅಥವಾ ಹಸ್ತಾಂತರಿಸಿಲ್ಲವೆಂದು, ಮೂಲ ರಸೀದಿಯು ಯಾವ ಪರಿಸ್ಥಿತಿಗಳಲ್ಲಿ ಕಳೆದುಹೋಯಿತೆಂದು ಅಥವಾ ನಾಶಹೊಂದಿದೆಯೆಂದು ಮತ್ತು ಕಳೆದುಹೋಗಿದ್ದರೆ, ರಸೀದಿಯನ್ನು ಹುಡುಕಲು ಶ್ರದ್ಧಾಪೂರ್ವಕ ಪ್ರಯತ್ನಗಳನ್ನು ನಡೆಸಿದ್ದು ಅದು ಯಶಸ್ವಿಯಾಗಲಿಲ್ಲವೆಂದು ತೋರಿಸುವ ಒಂದು ಶಪಥ ಪತ್ರ;

(ಬಿ) ಮೂಲ ರಸೀದಿಗಳು ಪ್ರತಿನಿಧಿಸುವ ಸರಕುಗಳ ಮೌಲ್ಯದ ಎರಡರಷ್ಟಕ್ಕೆ ಸಮನಾದ ಮೊಬಲಗಿಗಾಗಿ ಒಂದು ಬಂಧ ಪತ್ರ; ಮತ್ತು

(ಸಿ) ಐದು ರೂಪಾಯಿ ಮೊತ್ತ.

(2) (1)ನೇ ಉಪನಿಯಮದ ಅಡಿಯಲ್ಲಿ ಅರ್ಜಿಯನ್ನು ಸ್ವೀಕರಿಸಿದ ಮೇಲೆ ಉಗ್ರಾಣಪಾಲಕನು ರಸೀದಿಯು ಕಳೆದುಹೋದ, ನಾಶವಾದ ಸಂಗತಿಯನ್ನು ರಸೀದಿಯ ದ್ವಿಪ್ರತಿಯ ನೀಡಿಕೆಯ ಬಗ್ಗೆ ಸ್ಥಳೀಯ ವೃತ್ತ ಪತ್ರಿಕೆಗಳಲ್ಲಿ ಒಮ್ಮೆಯಾದರೂ ಒಂದು ವಾರದ ಸ್ಪಷ್ಟ ನೋಟೀಸನ್ನು ಕೊಟ್ಟು ಅಧಿಸೂಚಿಸತಕ್ಕದ್ದು.

(3) (2)ನೇ ಉಪ ನಿಯಮದಲ್ಲಿ ಉಲ್ಲೇಖಿಸಲಾದ ಅವಧಿಯು ಮುಕ್ತಾಯವಾದ ತರುವಾಯ, ಉಗ್ರಾಣಪಾಲಕನು ದ್ವಿಪ್ರತಿ ರಸೀದಿಯನ್ನು ನೀಡತಕ್ಕದ್ದು. ಅಂಥ ದ್ವಿಪ್ರತಿ ರಸೀದಿಯ ಮೇಲೆ "ದ್ವಿಪ್ರತಿ" ಎಂದು ಮುದ್ರೆಯೊತ್ತಿರತಕ್ಕದ್ದು.

(4) ದ್ವಿಪ್ರತಿ ರಸೀದಿಯನ್ನು ನೀಡಿದ ತರುವಾಯ, ಮೂಲ ರಸೀದಿಯನ್ನು ಹಾಜರುಪಡಿಸಿದರೆ, ಅದರ ಮೇಲೆ ವ್ಯವಹರಿಸತಕ್ಕದ್ದು.

(5) ಸ್ಥಳೀಯ ವಾರ್ತಾಪತ್ರಿಕೆಯಲ್ಲಿ ಅಧಿಸೂಚನೆಯನ್ನು ಪ್ರಕಟಿಸಲು ತಗುಲುವ ವೆಚ್ಚವನ್ನು, ಉಗ್ರಾಣದ ರಸೀದಿ ಕಳೆದುಕೊಂಡ ವ್ಯಕ್ತಿಯು ಭರಿಸತಕ್ಕದ್ದು.

**16. ರಸೀದಿಗಳ ವರ್ಗಾವಣೆ ಕುರಿತಂತೆ ಸರಕು ದಾಸ್ತಾನುದಾರರು ಮಾಹಿತಿಯನ್ನು ಒದಗಿಸುವುದು.-** ಪ್ರತಿಯೊಬ್ಬ ಸರಕು ದಾಸ್ತಾನುದಾರನು, ಉಗ್ರಾಣದ ರಸೀದಿಯ ಮೇಲೆ ದಾಖಲಿಸಬಹುದಾದ ವರ್ಗಾವಣೆ, ಅಡಮಾನ ಅಥವಾ ಋಣಭಾರಗಳಿಗೆ ಸಂಬಂಧಿಸಿದಂತೆ ಯಾವುದೇ ಹಿಂಬರಹವನ್ನು ಮಾಡಿದ ನಲವತ್ತೆಂಟು ಗಂಟೆಗಳೊಳಗೆ ಅಂಥ ಹಿಂಬರಹಕ್ಕೆ ಸಹಿ ಮಾಡಿ ಅದರ ಪ್ರತಿಗಳನ್ನು ಒದಗಿಸಲು ಬದ್ಧನಾಗಿರತಕ್ಕದ್ದು.

**17. ಉಗ್ರಾಣಪಾಲಕನು ವಿಧಿಸಬೇಕಾದ ಚಾರ್ಜುಗಳು.-** ಯಾರೇ ಉಗ್ರಾಣ ಪಾಲಕನು, ಸೇವೆಗಳಿಗೆ ಸಂಬಂಧಿಸಿದಂತೆ ಲೈಸೆನ್ಸಿಗಾಗಿ ಸಲ್ಲಿಸಿದ ಅರ್ಜಿಯ ಜೊತೆಗೆ ದಾಖಲ್ಮಾಡಿದ ಮತ್ತು ನಿಯಮಿಸಲಾದ ಪ್ರಾಧಿಕಾರಿಯಿಂದ ಕಾಲಕಾಲಕ್ಕೆ ಅನುಮೋದಿಸಿದ ಚಾರ್ಜುಗಳ ಪಟ್ಟಿಯಲ್ಲಿರುವುದಕ್ಕಿಂತ ಹೆಚ್ಚಿನ ಚಾರ್ಜುಗಳನ್ನು ವಿಧಿಸತಕ್ಕದ್ದಲ್ಲ ಅಥವಾ ವಸೂಲು ಮಾಡತಕ್ಕದ್ದಲ್ಲ:

ಪರಂತು, ಕೃಷಿ ಉತ್ಪನ್ನ (ಅಭಿವೃದ್ಧಿ ಮತ್ತು ಉಗ್ರಾಣ ವ್ಯವಸ್ಥೆ) ನಿಗಮಗಳ ಅಧಿನಿಯಮ, 1956ರ ಅಥವಾ ಉಗ್ರಾಣ ನಿಗಮಗಳ ಅಧಿನಿಯಮ, 1962ರ ಅಡಿಯಲ್ಲಿ ಸ್ಥಾಪಿತವಾದ ಉಗ್ರಾಣಗಳ ನಿಗಮವು, ಸಹಕಾರ ಸಂಘಗಳಿಂದ ಸ್ವೀಕರಿಸಿದ ದಾಸ್ತಾನುಗಳಿಗೆ ಚಾರ್ಜುಗಳ ಪಟ್ಟಿಯ ಶೇ. ಹತ್ತನ್ನು ಮೀರದಷ್ಟು ಸೋಡಿಗೆ ಅವಕಾಶ ನೀಡಬಹುದು.

**18. ಉಗ್ರಾಣದ ನಿರ್ವಹಣೆ.-** ಪ್ರತಿಯೊಬ್ಬ ಉಗ್ರಾಣಪಾಲಕನು, ಈ ಮುಂದಿನ ಷರತ್ತುಗಳನ್ನು ಪೂರೈಸುವ ರೀತಿಯಲ್ಲಿ ತನ್ನ ಉಗ್ರಾಣವನ್ನು ಇಡತಕ್ಕದ್ದು, ಎಂದರೆ:-

(i) ಉಗ್ರಾಣವನ್ನು ತೇವಾಂಶರಹಿತವಾಗಿ, ಪಕ್ಷಿ ಬಾರದಂತೆ ಮತ್ತು ಇಲಿ ಸೇರಿಕೊಳ್ಳದಂತೆ ಇಡತಕ್ಕದ್ದು;

(ii) ಅವಶ್ಯವಿರುವಾಗಲೆಲ್ಲಾ, ಉಗ್ರಾಣವನ್ನು ದುರಸ್ತಿ ಮಾಡತಕ್ಕದ್ದು ಮತ್ತು ಸೋಂಕು ರಹಿತ ಸ್ಥಿತಿಯಲ್ಲಿಟ್ಟಿರತಕ್ಕದ್ದು;

(iii) ದಾಸ್ತಾನಿನ ಲೆಕ್ಕ ತೆಗೆದುಕೊಳ್ಳುವ ಮತ್ತು ಅವುಗಳನ್ನು ಸರಿನೋಡುವ ಕೆಲಸವು ಸರಳವಾಗುವಂಥ ಮತ್ತು ಪರಿಣಾಮಕಾರಿಯಾಗುವಂಥ ರೀತಿಯಲ್ಲಿ ಉಗ್ರಾಣದಲ್ಲಿ ದಾಸ್ತಾನು ಮಾಡಿದ ಸರಕುಗಳನ್ನು ವ್ಯವಸ್ಥೆಗೊಳಿಸಿರತಕ್ಕದ್ದು ಮತ್ತು ದಾಸ್ತಾನು ಮಾಡಿರತಕ್ಕದ್ದು;

(iv) ಸರಕು, ಗೋಡೆಗಳಿಗೆ ತಾಕದಿರುವ ಹಾಗೆ ಅವುಗಳನ್ನು ದಾಸ್ತನು ಮಾಡತಕ್ಕದ್ದು ಮತ್ತು ಪ್ರತಿಯೊಂದು ದಾಸ್ತಾನಿನ ಸುತ್ತ ಸುಮಾರು 0.6 ಮೀಟರುಗಳ ಸ್ಥಳ ಬಿಡತಕ್ಕದ್ದು;

(v) ಸರಕು, ಸಾಮಾನ್ಯವಾಗಿ 9 ಮೀಟರುಗಳು x 6 ಮೀಟರುಗಳ ಅಳತೆಯನ್ನು ಮೀರತಕ್ಕದ್ದಲ್ಲ ಮತ್ತು ಎತ್ತರದಲ್ಲಿ 6.5 ಮೀಟರುಗಳನ್ನು ಮೀರತಕ್ಕದ್ದಲ್ಲ;

(vi) ಧಾರಕ ಮತ್ತು ಪ್ರತಿಯೊಂದು ಧಾರಕದಲ್ಲಿನ ವಸ್ತುಗಳು ಸಾಮಾನ್ಯವಾಗಿ ಏಕರೂಪದವು ಆಗಿರತಕ್ಕದ್ದು ಮತ್ತು ಅವು ನಿಯಮಿಸಲಾದ ಪ್ರಾಧಿಕಾರವು ಕಾಲಕಾಲಕ್ಕೆ ನೀಡುವ ಸಲಹೆಗನುಸಾರವಾಗಿರತಕ್ಕದ್ದು;

(vii) ಉಗ್ರಾಣದಲ್ಲಿ ದಾಸ್ತಾನು ಮಾಡಲು ಸ್ವೀಕರಿಸಿದ ಎಲ್ಲ ಸರಕುಗಳನ್ನು ಘನ ಮೀಟರುಗಳಲ್ಲಿ ಅಳತೆ ಮಾಡತಕ್ಕದ್ದು (ಉದ್ದ, ಅಗಲ ಮತ್ತು ಎತ್ತರ) ಅಥವಾ ಸಂದರ್ಭಾನುಸಾರ ತೂಕ ಮಾಡತಕ್ಕದ್ದು ಮತ್ತು ಅಂಥ ತೂಕ ಅಥವಾ ಅಳತೆಯನ್ನು ಲೈಸೆನ್ಸ್ ಹೊಂದಿರುವ ತೂಕ ಮಾಡುವವನು ಮಾಡತಕ್ಕದ್ದು ಮತ್ತು ಅಂಥ ಧಾರಕದ ಮೇಲೆ ಕ್ರಮಬದ್ಧವಾಗಿ ಕೊರೆಯಚ್ಚು ಮಾಡಿಸಿರತಕ್ಕದ್ದು ಅಥವಾ ಪ್ರತಿಯೊಂದು ದಾಸ್ತಾನಿನ ಮೇಲೆ ತೂಕ ಅಥವಾ ಅಳತೆಯ ದಿನಾಂಕ ಮತ್ತು ಪ್ರಮಾಣವನ್ನು ತೋರಿಸುವಂತೆ ಗುರುತಿನ ಚೀಟಿ ಅಂಟಿಸತಕ್ಕದ್ದು;

(viii) ಧಾರಕವು ಅಥವಾ ದಾಸ್ತಾನು, ವಿಭಿನ್ನ ಗುರುತು ಯಾವುದಾದರೂ ಇದ್ದರೆ, ಅದನ್ನು ಸರಕು ದಾಸ್ತಾನುದಾರನ ಹೆಸರನ್ನು ದಪ್ಪಕ್ಷರಗಳಲ್ಲಿ ಹೊಂದಿರತಕ್ಕದ್ದು ;

(ix) ಬೇರೆ ಬೇರೆ ವರ್ಗಗಳ ಅಥವಾ ದರ್ಜೆಗಳ ಅಥವಾ ಗುಣಮಟ್ಟಗಳ ಸರಕುಗಳನ್ನು ಪ್ರತ್ಯೇಕವಾಗಿ ದಾಸ್ತಾನು ಮಾಡತಕ್ಕದ್ದು;

(x) ಮಳೆಗಾಲದಲ್ಲಿ ಚಾವಣಿಯ ಸೋರುವಿಕೆ, ಗೋಡೆಗಳಲ್ಲಿ ಮತ್ತು ನೆಲದಲ್ಲಿ ತೇವಾಂಶ - ಇವುಗಳನ್ನು ಎಚ್ಚರಿಕೆಯಿಂದ ಗಮನಿಸತಕ್ಕದ್ದು ಮತ್ತು ಸಕಾಲದಲ್ಲಿ ದುರಸ್ತಿ ಮಾಡತಕ್ಕದ್ದು;

(xi) ಉಗ್ರಾಣದಲ್ಲಿ ಇಟ್ಟಿರುವ ತಕ್ಕಡಿಗಳು, ತೂಕ ಮತ್ತು ಅಳತೆ ಮಾಡುವಂಥ ಎಲ್ಲ ಉಪಕರಣಗಳು ಕರ್ನಾಟಕ ತೂಕ ಮತ್ತು ಅಳತೆ ಮಾನಕಗಳ (ಜಾರಿ) ಅಧಿನಿಯಮ, 1958 ಇದಕ್ಕೆ ಅನುಸಾರವಾಗಿರತಕ್ಕದ್ದು ಮತ್ತು ಏಣಿಗಳನ್ನು ಸರಿಯಾಗಿ ಮತ್ತು ಸುಸ್ಥಿತಿಯಲ್ಲಿ ಇಟ್ಟಿರತಕ್ಕದ್ದು.

**19. ಸರಕುಗಳಿಗಾಗುವ ಹಾನಿಯ ಬಗ್ಗೆ ಮುನ್ನೆಚ್ಚರಿಕೆ.-** ಪ್ರತಿಯೊಬ್ಬ ಉಗ್ರಾಣಪಾಲಕನು, ತನ್ನ ಉಗ್ರಾಣದಲ್ಲಿ ದಾಸ್ತಾನು ಮಾಡಲಾಗಿರುವ ಸರಕುಗಳನ್ನು ಎಲ್ಲ ಸಮಯಗಳಲ್ಲಿ ಸಾಕಷ್ಟು ಸ್ವಚ್ಛವಾಗಿ ಇಟ್ಟಿರತಕ್ಕದ್ದು ಮತ್ತು ಬೆಂಕಿ ಅಪಾಯದ ಸಂಭಾವ್ಯತೆಯನ್ನು ಹೆಚ್ಚಿಸಬಹುದಾದ ಅಥವಾ ಸರಕುಗಳ ನಿರ್ವಹಣೆಗೆ ಅಡ್ಡಿ ಉಂಟುಮಾಡಬಹುದಾದ ಹುಲ್ಲು, ಕಸಕಡ್ಡಿಗಳ, ಅಂಥ ಸಾಮಗ್ರಿಗಳ ಸಂಗ್ರಹಣೆಯಿಂದ ಮುಕ್ತವಾಗಿ ಇಡತಕ್ಕದ್ದು.

**20. ಕೆಲವು ಘಟನೆಗಳ ವಿರುದ್ಧ ಸರಕುಗಳಿಗೆ ವಿಮೆ ಮಾಡಿಸುವುದು ಮತ್ತು ವಿಮೆ ಮಾಡಿಸುವ ವಿಧಾನ.-** (1) ಪ್ರತಿಯೊಬ್ಬ ಉಗ್ರಾಣಪಾಲಕನು, ತನ್ನ ಉಗ್ರಾಣದಲ್ಲಿ ದಾಸ್ತಾನು ಮಾಡಿರುವ ಸರಕುಗಳಿಗೆ ಬೆಂಕಿ, ಪ್ರವಾಹ, ಕಳ್ಳತನ, ಕನ್ನಗಳ್ಳತನ, ಮುಷ್ಕರ ಮತ್ತು ದೊಂಬಿಯ ಕಾರಣದಿಂದ ಉಂಟಾಗುವ ನಷ್ಟ ಅಥವಾ ಹಾನಿಯ ವಿರುದ್ಧ ಸರಕುಗಳಿಗೆ ವಿಮೆ ಮಾಡಿಸತಕ್ಕದ್ದು:

ಪರಂತು, ಮುಷ್ಕರ ಅಥವಾ ದೊಂಬಿಯ ಕಾರಣದಿಂದ ಉಂಟಾಗುವ ನಷ್ಟ ಅಥವಾ ಹಾನಿಯ ವಿರುದ್ಧ ವಿಮೆ ಮಾಡಿಸುವುದು ಐಚ್ಛಿಕವಾಗಿರತಕ್ಕದ್ದು.

(2) (1)ನೇ ಉಪನಿಯಮದ ಅಡಿಯಲ್ಲಿನ ವಿಮೆಯನ್ನು ನಿಯಮಿಸಲಾದ ಪ್ರಾಧಿಕಾರವು ವಿಮೆಯ ಉದ್ದೇಶಕ್ಕಾಗಿ ಅನುಮೋದಿಸಿರುವ ಒಂದು ಕಂಪನಿಯಲ್ಲಿ ಮಾಡಿಸತಕ್ಕದ್ದು. ಅದು, ಯಾವ ಘಟನೆಯ ವಿರುದ್ಧ ವಿಮೆ ಮಾಡಿಸಲಾಗಿದೆಯೋ ಆ ಘಟನೆಯು ಸಂಭವಿಸಿದ ದಿನಾಂಕದಂದು ಇದ್ದಂತೆ ಮಾರುಕಟ್ಟೆ ಮೌಲ್ಯವನ್ನು ಸರಕು ದಾಸ್ತಾನುದಾರನು ಪಡೆಯುವಷ್ಟರ ಮಟ್ಟಿಗೆ ಇರತಕ್ಕದ್ದು.

(3) (1)ನೇ ಮತ್ತು (2)ನೇ ಉಪ ನಿಯಮಗಳಲ್ಲಿರುವುದು ಯಾವುದೂ, 18ನೇ ಪ್ರಕರಣದ (1)ನೇ ಉಪ ಪ್ರಕರಣದ ಪರಂತುಕದಲ್ಲಿ ಉಲ್ಲೇಖಿಸಲಾದ ಒಂದು ನಿಗಮವು (1)ನೇ ಉಪ ನಿಯಮದಲ್ಲಿ ನಿರ್ದಿಷ್ಟಪಡಿಸಲಾದ ಘಟನೆಗಳಿಂದ ಉಂಟಾದ ನಷ್ಟ ಅಥವಾ ಹಾನಿಗೆ ಪ್ರತಿಯಾಗಿ ಸರಕು ದಾಸ್ತಾನುದಾರನಿಗೆ ನಷ್ಟ ಪರಿಹಾರ ನೀಡಲು ಲಿಖಿತದಲ್ಲಿ ಒಪ್ಪಿಕೊಂಡಿದ್ದರೆ ಅಂಥ ನಿಗಮಕ್ಕೆ ಅನ್ವಯಿಸತಕ್ಕದ್ದಲ್ಲ.

**21. ಉಗ್ರಾಣಪಾಲಕನು ನಷ್ಟ ಅಥವಾ ಹಾನಿಯ ಬಗ್ಗೆ ವರದಿ ಮಾಡುವುದು.-** ಉಗ್ರಾಣದಲ್ಲಿ ಅಥವಾ ಉಗ್ರಾಣದ ಒಳಗೆ ಯಾವುದೇ ಸಮಯದಲ್ಲಿ ಬೆಂಕಿ, ಕಳ್ಳತನ, ದೊಂಬಿ, ಪ್ರವಾಹ, ಕನ್ನಗಳ್ಳತನ ಅಥವಾ ಮುಷ್ಕರದಿಂದ ನಷ್ಟ ಅಥವಾ ಹಾನಿ ಸಂಭವಿಸಿದರೆ, ಉಗ್ರಾಣಪಾಲಕನು, ಅಂಥ ಘಟನೆಯು ಸಂಭವಿಸಿದ್ದರ ಬಗ್ಗೆ ಮತ್ತು ಅದರಿಂದ ಉಂಟಾದ ನಷ್ಟ ಅಥವಾ ಹಾನಿಯ ಪ್ರಮಾಣದ ಬಗ್ಗೆ ಇಪ್ಪತ್ತನಾಲ್ಕು ಗಂಟೆಗಳೊಳಗಾಗಿ ನಿಯಮಿಸಲಾದ ಪ್ರಾಧಿಕಾರಕ್ಕೆ, ಸರಕು ದಾಸ್ತಾನುದಾರನಿಗೆ ಮತ್ತು ವಿಮಾ ಕಂಪನಿಗೆ ವರದಿ ಮಾಡತಕ್ಕದ್ದು.

**22. ಸರಕುಗಳ ವರ್ಗೀಕರಣ.-** (1) ಪ್ರತಿಯೊಬ್ಬ ಉಗ್ರಾಣಪಾಲಕನು ತನ್ನ ಉಗ್ರಾಣದಲ್ಲಿ ದಾಸ್ತಾನು ಮಾಡಲಾದ ಸರಕುಗಳನ್ನು ಎಲ್ಲ ಲಾಟುಗಳ ಬಳಿಗೆ ಸುಲಭವಾಗಿ ಹೋಗಲು ಮತ್ತು ಪ್ರತಿಯೊಂದು ಲಾಟಿನ ಪರಿಶೀಲನೆ, ಮಾದರಿ ಪರೀಕ್ಷೆ, ಎಣಿಕೆ ಮತ್ತು ಗುರುತಿಸುವಿಕೆಗೆ ಅನುಕೂಲವಾಗುವಂತೆ ಇಡತಕ್ಕದ್ದು.

(2) ಉಗ್ರಾಣದಲ್ಲಿ ದಾಸ್ತಾನು ಮಾಡಲಾದ ಯಾವುವೇ ಸರಕುಗಳ ಗುಣಮಟ್ಟ, ಮಾನಕ ಅಥವಾ ಶ್ರೇಣಿಯನ್ನು ಈ ಅಧಿನಿಯಮದ ಉದ್ದೇಶಕ್ಕಾಗಿ ತಿಳಿಸಿರುವಾಗಲೆಲ್ಲಾ ಅಥವಾ ತಿಳಿಸಬೇಕೆಂದು ಅಗತ್ಯಪಡಿಸಿರುವಾಗಲೆಲ್ಲ, ಅದು, ನಿಯಮಿಸಲಾದ ಪ್ರಾಧಿಕಾರಿಯು ಒಂದು ನಿರ್ದಿಷ್ಟ ಸರಕಿಗಾಗಿ ಕಾಲಕಾಲಕ್ಕೆ ನಿರ್ಧರಿಸಿದ ಗುಣಮಟ್ಟ, ಮಾನಕ ಅಥವಾ ಶ್ರೇಣಿಗಳು ಯಾವುವಾದರೂ ಇದ್ದರೆ ಅವುಗಳಿಗೆ ಅನುಸಾರವಾಗಿ ಇರತಕ್ಕದ್ದು.

**23. ಸರಕುಗಳಿಗೆ ಉಂಟಾದ ನಷ್ಟ ಅಥವಾ ಹಾನಿಯ ಬಗ್ಗೆ ನೋಟೀಸು.-** ದಾಸ್ತಾನು ಇಟ್ಟಿರುವ ಸರಕುಗಳನ್ನು ಹಿಂದಕ್ಕೆ ಪಡೆಯುವ ಸಮಯದಲ್ಲಿ, ಸರಕುಗಳು ಕಳೆದುಹೋಗಿವೆ ಅಥವಾ ಅವುಗಳಿಗೆ ಹಾನಿಯುಂಟಾಗಿದೆಯೆಂದು ಸರಕು ದಾಸ್ತಾನುದಾರನಿಗೆ ಕಂಡು ಬಂದರೆ, ಅವನು ಸರಕು ಹಿಂದಕ್ಕೆ ಪಡೆಯುವ ಸಮಯದಲ್ಲಿ ಸರಕುಗಳ ನಷ್ಟ ಅಥವಾ ಹಾನಿಯ ಪೂರ್ಣ ವಿವರಗಳೊಂದಿಗೆ ಕೂಡಲೇ ಉಗ್ರಾಣಪಾಲಕನಿಗೆ ಒಂದು ಲಿಖಿತ ನೋಟೀಸನ್ನು ನೀಡತಕ್ಕದ್ದು. ಆ ನೋಟೀಸಿನ ಒಂದು ಪ್ರತಿಯನ್ನು ನಿಯಮಿಸಲಾದ ಪ್ರಾಧಿಕಾರಕ್ಕೂ ಕಳುಹಿಸತಕ್ಕದ್ದು. ಸರಕು ದಾಸ್ತಾನುದಾರನು ನಷ್ಟ ಅಥವಾ ಹಾನಿಯ ಬಗ್ಗೆ ನೋಟೀಸು ನೀಡಿರದಿದ್ದರೆ, ಉಗ್ರಾಣಪಾಲಕನ ವಿರುದ್ಧ ಮಾಡಲಾದ ಯಾವುದೇ ಕ್ಲೇಮು

ಸಿಂಧುವಾಗತಕ್ಕದ್ದಲ್ಲ. ಸರಕುಗಳನ್ನು ಉಗ್ರಾಣದಲ್ಲಿ ದಾಸ್ತಾನು ಮಾಡಿರುವಾಗ ಅದಕ್ಕೆ ನಷ್ಟ ಅಥವಾ ಹಾನಿಯುಂಟಾಗಿದೆ ಎಂದು ಸರಕು ದಾಸ್ತಾನುದಾರನಿಗೆ ತಿಳಿದುಬಂದ ಸಂದರ್ಭದಲ್ಲಿ ಸರಕು ದಾಸ್ತಾನುದಾರನು ಹಾನಿ ಪರಿಹಾರವನ್ನು ಕ್ಲೇಮು ಮಾಡಲು ಉಗ್ರಾಣ ಪಾಲಕನಿಗೆ ಅಂಥದ್ದೇ ನೋಟೀಸನ್ನು ನೀಡತಕ್ಕದ್ದು.

**24. ಸರಕುಗಳನ್ನು ಭಾಗಶಃ ಹಿಂತಿರುಗಿಸುವುದು.-** ವರ್ಗಾವಣೀಯ ರಸೀದಿಯನ್ನು ನೀಡಲಾದಂಥ ಸರಕುಗಳ ಒಂದು ಭಾಗವನ್ನು ಉಗ್ರಾಣ ಪಾಲಕನು ಹಿಂದಿರುಗಿಸಿದರೆ, ಅವನು, ಅಂಥ ರಸೀದಿಯ ಮೇಲೆ, ಹಾಗೆ ಹಿಂದಿರುಗಿಸಿದ ಸರಕುಗಳ ಅಥವಾ ಮೂಟೆಗಳ ಒಂದು ವಿವರ ಪಟ್ಟಿಯನ್ನು ಸ್ಪಷ್ಟವಾಗಿ ಸೂಚಿಸಿರತಕ್ಕದ್ದು. ಅಂಥ ವಿವರ ಪಟ್ಟಿಯನ್ನು ತಯಾರಿಸಲು ಅವನು ತಪ್ಪಿದಾಗ, ಉಗ್ರಾಣ ಪಾಲಕನು, ರಸೀದಿಯನ್ನು ಸದ್ಭಾವನೆಯಿಂದ ಖರೀದಿಸುವ ಯಾರೇ ವ್ಯಕ್ತಿಗೆ ರಸೀದಿಯಲ್ಲಿ ನಿರ್ದಿಷ್ಟಪಡಿಸಲಾದ ಎಲ್ಲ ಸರಕುಗಳನ್ನು ಹಿಂದಿರುಗಿಸಲು ತಪ್ಪಿದ್ದಕ್ಕಾಗಿ ಮತ್ತು ಸರಕುಗಳ ಯಾವುದೇ ಭಾಗವನ್ನು ಹಿಂದಿರುಗಿಸುವುದಕ್ಕೆ ಮುಂಚೆ ಅಥವಾ ತರುವಾಯ ಖರೀದಿದಾರನು ರಸೀದಿಗೆ ಹಕ್ಕನ್ನು ಆರ್ಜಿಸಿರಲಿ ಅಥವಾ ಇಲ್ಲದಿರಲಿ ಮೌಲಿಕ ಪ್ರತಿಫಲ ನೀಡಲು ಹೊಣೆಗಾರನಾಗಿರತಕ್ಕದ್ದು.

**25. ಪುಸ್ತಕಗಳು, ದಾಖಲೆಗಳು, ಇತ್ಯಾದಿಗಳನ್ನು ಇಟ್ಟುಕೊಂಡು ಬರುವುದು.-** ಪ್ರತಿಯೊಬ್ಬ ಉಗ್ರಾಣ ಪಾಲಕನು,-

(i) ನಮೂನೆ ಸಂ.7ರಲ್ಲಿ ಒಂದು ದಾಸ್ತಾನು ರಿಜಿಸ್ಟರ್‌ನ್ನು;

(ii) ನಮೂನೆ ಸಂ.8 ರಲ್ಲಿ ಪ್ರತಿಯೊಬ್ಬ ಸರಕು ದಾಸ್ತಾನುದಾರನಿಗೆ ಒಂದು ಲೆಡ್ಜರನ್ನು;

(iii) ನಮೂನೆ ಸಂ.9 ರಲ್ಲಿ ಒಂದು ಸಾಮಾನ್ಯ ವಿಮೆ ಲೆಕ್ಕವನ್ನು

- ಇಟ್ಟುಕೊಂಡು ಬರತಕ್ಕದ್ದು.

**26. ಕೊರತೆ ಅಥವಾ ಹೆಚ್ಚುವರಿಯ ಬಗ್ಗೆ ವಿವಾದ.-** ಸರಕುಗಳ ಕೊರತೆ ಅಥವಾ ಹೆಚ್ಚುವರಿಯು, ಒಣಗುವಿಕೆ ಅಥವಾ ತೇವಾಂಶ ಹೀರಿಕೆಯ ಕಾರಣದಿಂದ ಉಂಟಾಗಿದೆಯೇ ಅಥವಾ ಅದು ಉಗ್ರಾಣಪಾಲಕನ ನಿಯಂತ್ರಣವನ್ನು ಮೀರಿದ ಇತರ ಕಾರಣದಿಂದಾಗಿ ಉಂಟಾಗಿದೆಯೇ ಎಂಬ ಬಗ್ಗೆ ಯಾವುದೇ ವಿವಾದ ಉದ್ಭವಿಸಿದ ಸಂದರ್ಭದಲ್ಲಿ, ಸರಕು ದಾಸ್ತಾನುದಾರನು ಉಗ್ರಾಣದಲ್ಲಿ ದಾಸ್ತಾನು ಮಾಡಿದ ಸರಕುಗಳನ್ನು ಹಿಂತೆಗೆದುಕೊಂಡ ನಂತರ, ಸರಕು ದಾಸ್ತಾನುದಾರನಿಗೆ ಸರಕುಗಳನ್ನು ಹಿಂತೆಗೆದುಕೊಂಡ ದಿನಾಂಕದಿಂದ ಮೂವತ್ತು ದಿನಗಳೊಳಗಾಗಿ, ಉಂಟಾಗಿರುವ ಕೊರತೆ ಅಥವಾ ಹೆಚ್ಚುವರಿ, ಅದಕ್ಕೆ ಕಾರಣ ಮತ್ತು ಅವನಿಗೆ ಆಗಿರುವ ನಷ್ಟ - ಇವುಗಳನ್ನು ಸೂಚಿಸಿ, ರಾಜ್ಯ ಸರ್ಕಾರಕ್ಕೆ ಒಂದು ಲಿಖಿತ ಅರ್ಜಿಯನ್ನು ಸಲ್ಲಿಸತಕ್ಕದ್ದು.

**27. ಉಗ್ರಾಣದಲ್ಲಿ ಹಾಳಾಗುತ್ತಿರುವ ಅಥವಾ ಹಾಳಾಗಲು ಆರಂಭವಾಗಿರುವ ಸರಕುಗಳ ಹರಾಜು ಮಾರಾಟ.-** ಉಗ್ರಾಣದಲ್ಲಿ ದಾಸ್ತಾನು ಮಾಡಲಾಗಿದ್ದು ಹಾಳಾಗಿರುವ ಸರಕುಗಳನ್ನು 15ನೇ ಪ್ರಕರಣದ (2)ನೇ ಉಪ ಪ್ರಕರಣದ ಅಡಿಯಲ್ಲಿ ಬಹಿರಂಗ ಹರಾಜಿನಲ್ಲಿ ಮಾರಾಟ ಮಾಡುವುದಕ್ಕೆ ಮುಂಚೆ, ಉಗ್ರಾಣಪಾಲಕನು, ಹರಾಜಿನ ದಿನಾಂಕಕ್ಕೆ ಕನಿಷ್ಠ ಒಂದು ವಾರದ ಮೊದಲು ಹರಾಜಿನ ದಿನಾಂಕ, ವೇಳೆ ಮತ್ತು ಸ್ಥಳವನ್ನು ಸೂಚಿಸಿ ಸರಕು ದಾಸ್ತಾನುದಾರನಿಗೆ ಒಂದು ನೋಟೀಸನ್ನು ನೀಡತಕ್ಕದ್ದು. ನೋಟೀಸನ್ನು ಸ್ಥಳೀಯ ವಾರ್ತಾಪತ್ರಿಕೆಯಲ್ಲಿ ಪ್ರಕಟಿಸತಕ್ಕದ್ದು ಮತ್ತು ಉಗ್ರಾಣವು ನಿಯಂತ್ರಿತ ಮಾರುಕಟ್ಟೆ ಪ್ರದೇಶದಲ್ಲಿ ಇರುವಂಥ ಸಂದರ್ಭದಲ್ಲಿ ಸ್ಥಳೀಯ ನಿಯಂತ್ರಿತ ಮಾರುಕಟ್ಟೆ ಸಮಿತಿಯ ಸೂಚನಾ ಫಲಕದಲ್ಲಿ ಅದನ್ನು ಪ್ರದರ್ಶಿಸತಕ್ಕದ್ದು. ನೋಟೀಸಿನ ಪ್ರತಿಗಳನ್ನು ನಿಯಮಿಸಲಾದ ಪ್ರಾಧಿಕಾರಕ್ಕೆ ಸಹ ಕಳುಹಿಸತಕ್ಕದ್ದು.

**28. ಹರಾಜು ಮಾರಾಟದ ಹುಟ್ಟುವಳಿಗಳ ಬಗ್ಗೆ ಲೆಕ್ಕ ಇಡುವಿಕೆ.-** ಪ್ರತಿಯೊಬ್ಬ ಉಗ್ರಾಣಪಾಲಕನು, ಸರಕು ದಾಸ್ತಾನುದಾರನಿಗೆ ಸರಿಯಾದ ಲೆಕ್ಕಗಳನ್ನು ಕೊಡತಕ್ಕದ್ದು ಮತ್ತು ಅವನಿಗೆ ಹರಾಜು ಮಾರಾಟದ ತರುವಾಯ, ಸರಕುಗಳನ್ನು ರವಾನಿಸಲು ಮತ್ತು ಬಹಿರಂಗ ಹರಾಜಿನಲ್ಲಿ ಅವುಗಳನ್ನು ಮಾರಾಟ ಮಾಡಲು ತಗುಲಿದ ಎಲ್ಲ ಯುಕ್ತ ವೆಚ್ಚಗಳೂ ಸೇರಿ, ತನಗೆ ಕಾನೂನುಬದ್ಧವಾಗಿ ಬರಬೇಕಾಗಿರುವ ಎಲ್ಲ ವೆಚ್ಚಗಳನ್ನು ಮುರಿದುಕೊಂಡ ನಂತರ ಹರಾಜು ಮಾರಾಟವು ಮುಗಿದ ಮೇಲೆ ಉಳಿಯುವ ಸರಕುಗಳ ಮಾರಾಟ ಹುಟ್ಟುವಳಿ, ಅಂಥ ಮಾರಾಟದ ದಿನಾಂಕದಿಂದ ಹದಿನೈದು ದಿನಗಳನ್ನು ಮೀರದ ಅವಧಿಯೊಳಗಾಗಿ ಅವನಿಗೆ ಸಂದಾಯ ಮಾಡತಕ್ಕದ್ದು. ವಿಧ್ಯುಕ್ತವಾಗಿ ಹೊಣೆಯಿಂದ ಮುಕ್ತಗೊಳಿಸಿದ ರಸೀದಿಯನ್ನು ಸರಕು ದಾಸ್ತಾನುದಾರನು ಒಪ್ಪಿಸಿದ ಮೇಲೆ ಮತ್ತು ಉಗ್ರಾಣಪಾಲಕನಿಗೆ ಬಾಕಿ ಇರುವ ಎಲ್ಲ ವೆಚ್ಚಗಳನ್ನು ಸಂದಾಯ ಮಾಡಿದ ಮೇಲೆ ಅವನು ಮಾರಾಟದ ನಿವ್ವಳ ಹುಟ್ಟುವಳಿಯನ್ನು ಅವನಿಗೆ ಸಂದಾಯ ಮಾಡತಕ್ಕದ್ದು.

**29. ಉಗ್ರಾಣಪಾಲಕನು ಸರಕುಗಳನ್ನು ಸ್ಥಳಾಂತರಿಸುವುದು ಅಥವಾ ವರ್ಗಾವಣೆ ಮಾಡುವುದು.-** ಉಗ್ರಾಣ ಪಾಲಕನು, ಉಗ್ರಾಣದಲ್ಲಿ ದಾಸ್ತಾನು ಮಾಡಿದ ಯಾವುವೇ ಸರಕುಗಳನ್ನು ಸ್ಥಳಾಂತರಿಸಬಹುದು ಅಥವಾ ಅವುಗಳನ್ನು ಇನ್ನೊಂದು ಉಗ್ರಾಣಕ್ಕೆ ವರ್ಗಾಯಿಸಬಹುದು. ಆದರೆ, ವರ್ಗಾವಣೆ ಮಾಡಿದ ನಿಕಟ ತರುವಾಯದಲ್ಲೇ ಈಗ ಇರುವ ರಸೀದಿಯನ್ನು ರದ್ದುಗೊಳಿಸಬೇಕು ಮತ್ತು ಹೊಸ ರಸೀದಿಯನ್ನು ನೀಡಬೇಕು.

## ಅಧ್ಯಾಯ-IV

## ತೂಕ ಮಾಡುವವರು, ಮಾದರಿಗಳ ಪರೀಕ್ಷಕರು ಮತ್ತು ಶ್ರೇಣಿಕಾರರು

**30. ತೂಕ ಮಾಡುವವರು, ಮಾದರಿಗಳ ಪರೀಕ್ಷಕರು ಮತ್ತು ಶ್ರೇಣಿಕಾರರಿಂದ ಲೈಸೆನ್ಸಿಗಾಗಿ ಅರ್ಜಿ.-** (1) (2)ನೇ ಉಪನಿಯಮದಲ್ಲಿ ನಿರ್ದಿಷ್ಟಪಡಿಸಿದ ವಿದ್ಯಾರ್ಹತೆಯುಳ್ಳ ವ್ಯಕ್ತಿಗಳು ತೂಕ ಮಾಡುವವರಾಗಿ, ಮಾದರಿಗಳ ಪರೀಕ್ಷಕರಾಗಿ ಮತ್ತು ಶ್ರೇಣಿಕಾರರುಗಳಾಗಿ ಕಾರ್ಯನಿರ್ವಹಿಸಲು ಲೈಸೆನ್ಸುಗಳ ಮಂಜೂರಾತಿಗಾಗಿ ಅರ್ಜಿಗಳನ್ನು ಸಲ್ಲಿಸಬಹುದು ಮತ್ತು ಅಂಥ ಪ್ರತಿಯೊಂದು ಅರ್ಜಿಯ ಜೊತೆಗೆ ಐದು ರೂಪಾಯಿಗಳ ಒಂದು ಶುಲ್ಕವಿರತಕ್ಕದ್ದು ಮತ್ತು ಅದನ್ನು ನಿಯಮಿಸಲಾದ ಪ್ರಾಧಿಕಾರಕ್ಕೆ ನಮೂನೆ ಸಂ.10 ರಲ್ಲಿ ಲಿಖಿತದಲ್ಲಿ ಸಲ್ಲಿಸತಕ್ಕದ್ದು.

(2) ಪ್ರತಿಯೊಬ್ಬ ತೂಕ ಮಾಡುವವನು, ಮಾದರಿಗಳ ಪರೀಕ್ಷಕನು ಅಥವಾ ಶ್ರೇಣಿಕಾರನು, ಈ ಮುಂದೆ ನಿರ್ದಿಷ್ಟಪಡಿಸಲಾಗಿರುವ ಕನಿಷ್ಠ ವಿದ್ಯಾರ್ಹತೆಯನ್ನು ಹೊಂದಿರತಕ್ಕದ್ದು:-

(i) ತೂಕ ಮಾಡುವವನು ಕನ್ನಡ ಓದಲು, ಬರೆಯಲು ತಿಳಿದಿರುವಂಥ ಒಬ್ಬ ಅಕ್ಷರಸ್ಥ ವ್ಯಕ್ತಿಯಾಗಿರತಕ್ಕದ್ದು;

(ii) ಮಾದರಿಗಳ ಪರೀಕ್ಷಕ ಅಥವಾ ಶ್ರೇಣಿಕಾರನು, VIIIನೇ ತರಗತಿಯಲ್ಲಿ ತೇರ್ಗಡೆಯಾಗಿರತಕ್ಕದ್ದು.

(3) ನಿಯಮಿಸಲಾದ ಪ್ರಾಧಿಕಾರವು, ತಾನು ಸೂಕ್ತವೆಂದು ಭಾವಿಸುವಂಥ ವಿಚಾರಣೆಯನ್ನು ನಡೆಸಿದ ತರುವಾಯ, ಅರ್ಜಿದಾರನು, ಈ ನಿಯಮಗಳನ್ನು ಮತ್ತು (4)ನೇ ಉಪ ನಿಯಮದಲ್ಲಿ ನಿರ್ದಿಷ್ಟಪಡಿಸಲಾದ ಷರತ್ತುಗಳನ್ನು ಪಾಲಿಸಲು ಒಪ್ಪಿರುವ ಬಗ್ಗೆ ನಿಯಮಿಸಲಾದ ಪ್ರಾಧಿಕಾರವು ನಿರ್ಧರಿಸಬಹುದಾದಂಥ ನಮೂನೆಯಲ್ಲಿ ಒಂದು ಒಪ್ಪಂದಪತ್ರವನ್ನು ಬರೆದುಕೊಟ್ಟ ಮೇಲೆ ನಮೂನೆ ಸಂ.11 ರಲ್ಲಿ ಅರ್ಜಿ ಸಲ್ಲಿಸಿ ಕೋರಿರುವ ಲೈಸೆನ್ಸನ್ನು ಮಂಜೂರು ಮಾಡಬಹುದು.

(4) (3)ನೇ ಉಪ ನಿಯಮದ ಅಡಿಯಲ್ಲಿನ ಲೈಸೆನ್ಸು, ಈ ಮುಂದಿನ ಷರತ್ತುಗಳಿಗೊಳಪಟ್ಟಿರತಕ್ಕದ್ದು, ಎಂದರೆ:-

(i) ಲೈಸೆನ್ಸುದಾರನು, ನಿಯಮಿಸಲಾದ ಪ್ರಾಧಿಕಾರವು ಕಾಲಕಾಲಕ್ಕೆ ನಿರ್ದೇಶಿಸಬಹುದಾದಂಥ ನಮೂನೆಗಳಲ್ಲಿ ಪುಸ್ತಕಗಳನ್ನು ಇಡತಕ್ಕದ್ದು ಮತ್ತು ಪ್ರಾಧಿಕಾರವು ನಿರ್ದೇಶಿಸಬಹುದಾದಂಥ ವೇಳೆಗಳಲ್ಲಿ ಮತ್ತು ಅಂಥ ನಮೂನೆಗಳಲ್ಲಿ ನಿಯಮಿಸಲಾದಂಥ ವಿವರಪಟ್ಟಿಕೆಯನ್ನು ಸಲ್ಲಿಸತಕ್ಕದ್ದು;

(ii) ನಿಯಮಿಸಲಾದ ಪ್ರಾಧಿಕಾರವು ನಿರ್ದಿಷ್ಟಪಡಿಸಬಹುದಾದಂಥ ಉಪಕರಣಗಳನ್ನು ಲೈಸೆನ್ಸುದಾರನು ಹೊಂದಿರತಕ್ಕದ್ದು;

(iii) ಲೈಸೆನ್ಸುದಾರನು, ವ್ಯಾಪಾರದ ತನ್ನ ಕಾರ್ಯನಿರ್ವಹಣೆಯಲ್ಲಿ, ನಿಯಮಿಸಲಾದ ಪ್ರಾಧಿಕಾರವು ನೀಡಿದ ಸೂಕ್ತ ವಿನ್ಯಾಸದ ಒಂದು ವಿಶಿಷ್ಟ ಬಿಲ್ಲೆಯನ್ನು ಧರಿಸತಕ್ಕದ್ದು. ಅಂಥ ತೂಕ ಮಾಡುವವನು, ಮಾದರಿಗಳ ಪರೀಕ್ಷಕನು ಅಥವಾ ಶ್ರೇಣಿಕಾರನು, ಬಿಲ್ಲೆಯ ವೆಚ್ಚವನ್ನು ಭರಿಸಲು ಒಂದು ರೂಪಾಯಿಗಿಂತ ಕಡಿಮೆಯಲ್ಲದ ಮತ್ತು ಐದು ರೂಪಾಯಿಗಳಿಗಿಂತ ಹೆಚ್ಚಿಲ್ಲದ ಠೇವಣಿ ಹಣವನ್ನು ನಿಯಮಿಸಲಾದ ಪ್ರಾಧಿಕಾರಕ್ಕೆ ಸಂದಾಯ ಮಾಡತಕ್ಕದ್ದು.

(iv) ಯಾರೇ ಲೈಸೆನ್ಸುದಾರನು, ನಿಯಮಿಸಲಾದ ಪ್ರಾಧಿಕಾರವು ಕಾಲಕಾಲಕ್ಕೆ ವಿಧಿಸಿದ ದರಗಳ ಹೊರತಾದ ವೆಚ್ಚಗಳನ್ನು ವಸೂಲಿ ಮಾಡತಕ್ಕದ್ದಲ್ಲ;

(v) ಯಾರೇ ಲೈಸೆನ್ಸುದಾರನು, ಇನ್ನೊಬ್ಬ ವ್ಯಕ್ತಿಯ ಸೇವೆಗೆ ಸೇರತಕ್ಕದ್ದಲ್ಲ ಅಥವಾ ತಾನು ಯಾವ ವ್ಯವಹಾರಕ್ಕಾಗಿ ಲೈಸೆನ್ಸ್ ಹೊಂದಿರುವನೋ ಅದರ ಹೊರತಾದ ವ್ಯವಹಾರವನ್ನು ಮಾಡತಕ್ಕದ್ದಲ್ಲ.

(5) (3)ನೇ ಉಪ ನಿಯಮದಲ್ಲಿ ಏನೇ ಒಳಗೊಂಡಿದ್ದರೂ, ಯಾರೇ ವ್ಯಕ್ತಿಯು ಧನಾನುಕೂಲತೆ ಇಲ್ಲದವನೆಂದು ಅಥವಾ ಯಾರ ಕಾರ್ಯಾಚರಣೆಗಳು ಉಗ್ರಾಣದ ಕೆಲಸವನ್ನು ಸಮರ್ಥವಾಗಿ ಮುಂದುವರಿಸಿಕೊಂಡು ಹೋಗಲು

ಸಾಧ್ಯವಾಗಿಸಲಾಗದಂಥವೆಂದು ನಿಯಮಿಸಲಾದ ಪ್ರಾಧಿಕಾರವು ಅಭಿಪ್ರಾಯ ಪಟ್ಟಿರುವುದೋ, ಅಂಥ ಯಾರೇ ವ್ಯಕ್ತಿಗೆ ಒಂದು ಲೈಸೆನ್ಸ್ ಮಂಜೂರು ಮಾಡಲು ನಿರಾಕರಿಸಬಹುದು:

ಪರಂತು, ತೂಕ ಮಾಡುವವನು ಅಥವಾ ಮಾದರಿಗಳ ಪರೀಕ್ಷಕನು ಕೃಷಿ ಉತ್ಪನ್ನ (ಅಭಿವೃದ್ಧಿ ಮತ್ತು ಉಗ್ರಾಣ ವ್ಯವಸ್ಥೆ) ನಿಗಮ ಅಧಿನಿಯಮ, 1956 ಅಥವಾ ಉಗ್ರಾಣ ನಿಗಮಗಳ ಅಧಿನಿಯಮ, 1962ರ ಅಡಿಯಲ್ಲಿ ಸ್ಥಾಪಿತವಾದ ಉಗ್ರಾಣ ನಿಗಮದ ನೌಕರನಾಗಿರುವ ಸಂದರ್ಭದಲ್ಲಿ, ಲೈಸೆನ್ಸಿನ ಮಂಜೂರಾತಿಗಾಗಿ ಯಾವುದೇ ಧನಾನುಕೂಲತೆ ಪ್ರಮಾಣ ಪತ್ರ ಸಲ್ಲಿಸುವ ಅವಶ್ಯಕತೆ ಇರತಕ್ಕದ್ದಲ್ಲ.

**31. ತೂಕ ಮಾಡುವವರು, ಮಾದರಿಗಳ ಪರೀಕ್ಷಕರು ಮತ್ತು ಶ್ರೇಣಿಕಾರರಿಗೆ ಮಂಜೂರು ಮಾಡಿದ ಲೈಸೆನ್ಸುಗಳ ಅವಧಿ.-** ಒಬ್ಬ ತೂಕ ಮಾಡುವವನಿಗೆ, ಮಾದರಿಗಳ ಪರೀಕ್ಷಕನಿಗೆ ಅಥವಾ ಶ್ರೇಣಿಕಾರನಿಗೆ ನೀಡಲಾಗುವ ಒಂದು ಲೈಸೆನ್ಸು, ಮಂಜೂರಾದ ದಿನಾಂಕದಿಂದ ಮುಂಬರುವ ಮಾರ್ಚ್ 31ರ ವರೆಗೆ ಜಾರಿಯಲ್ಲಿರತಕ್ಕದ್ದು.

**32. ತೂಕ ಮಾಡುವವರು, ಮಾದರಿಗಳ ಪರೀಕ್ಷಕರು ಅಥವಾ ಶ್ರೇಣಿಕಾರರಿಗೆ ನೀಡಬೇಕಾದ ಪ್ರಮಾಣ ಪತ್ರ.-** ತೂಕ ಮಾಡುವವರು, ಮಾದರಿಗಳ ಪರೀಕ್ಷಕರು ಅಥವಾ ಶ್ರೇಣಿಕಾರರಿಗೆ ನೀಡಬೇಕಾದ ಪ್ರಮಾಣ ಪತ್ರಗಳು ನಮೂನೆ ಸಂ.12 ರಲ್ಲಿರತಕ್ಕದ್ದು.

**33. ತೂಕ ಮಾಡುವವರ, ಮಾದರಿಗಳ ಪರೀಕ್ಷಕರ ಮತ್ತು ಶ್ರೇಣಿಕಾರರ ಲೈಸೆನ್ಸುಗಳ ನವೀಕರಣ.-** ತೂಕ ಮಾಡುವವರಿಗೆ, ಮಾದರಿಗಳ ಪರೀಕ್ಷಕರಿಗೆ ಮತ್ತು ಶ್ರೇಣಿಕಾರರಿಗೆ ನೀಡಲಾದ ಲೈಸೆನ್ಸುಗಳ ನವೀಕರಣದ ಅರ್ಜಿಗಳನ್ನು, ಲೈಸೆನ್ಸುಗಳು ಕೊನೆಯಾಗುವ ಅಥವಾ ಅವಧಿ ಮುಗಿಯುವ ಕನಿಷ್ಠ ಒಂದು ತಿಂಗಳ ಮುಂಚೆ ಸಲ್ಲಿಸತಕ್ಕದ್ದು ಮತ್ತು ಅರ್ಜಿಯ ಜೊತೆಗೆ ಐದು ರೂಪಾಯಿಗಳ ಒಂದು ಶುಲ್ಕವಿರತಕ್ಕದ್ದು. ಲೈಸೆನ್ಸಿನ ನವೀಕರಣದ ಷರತ್ತುಗಳು ಹೊಸ ಲೈಸೆನ್ಸ್ ನೀಡಿದಾಗ ಇರುವಂಥಹವೇ ಆಗಿರತಕ್ಕದ್ದು.

**34. ತೂಕ ಮಾಡುವವರಿಗೆ, ಮಾದರಿಗಳ ಪರೀಕ್ಷಕರಿಗೆ ಮತ್ತು ಶ್ರೇಣಿಕಾರರಿಗೆ ದ್ವಿಪ್ರತಿ ಲೈಸೆನ್ಸ್ ನೀಡಿಕೆಗೆ ಶುಲ್ಕ.-** 24ನೇ ಪ್ರಕರಣದ (6)ನೇ ಉಪ ಪ್ರಕರಣದ ಅಡಿಯಲ್ಲಿ ದ್ವಿಪ್ರತಿ ಲೈಸೆನ್ಸ್ ನೀಡಿಕೆಗಾಗಿನ ಶುಲ್ಕವು ಐದು ರೂಪಾಯಿಗಳಾಗಿರತಕ್ಕದ್ದು.

**35. ತೂಕ ಮಾಡುವವರ, ಮಾದರಿಗಳ ಪರೀಕ್ಷಕರ ಮತ್ತು ಶ್ರೇಣಿಕಾರರ ಲೈಸೆನ್ಸನ್ನು ಅಮಾನತುಗೊಳಿಸುವುದು ಅಥವಾ ರದ್ದುಗೊಳಿಸುವುದು.-** ಯಾರೇ ತೂಕ ಮಾಡುವವನು, ಮಾದರಿಗಳ ಪರೀಕ್ಷಕನು ಅಥವಾ ಶ್ರೇಣಿಕಾರನು ಲೈಸೆನ್ಸಿನ ಅಥವಾ ಈ ನಿಯಮಗಳ ಯಾವುವೇ ಷರತ್ತುಗಳನ್ನು ಉಲ್ಲಂಘಿಸಿದರೆ ಅಥವಾ ಲೈಸೆನ್ಸುದಾರನಾಗಿ ಅವನು ಮುಂದುವರಿದರೆ ಉಗ್ರಾಣದ ಕಾರ್ಯ ನಿರ್ವಹಣೆಗೆ ಬಾಧಕವಾಗುವ ಸಾಧ್ಯತೆ ಇದೆ ಎಂದು ನಿಯಮಿಸಲಾದ ಪ್ರಾಧಿಕಾರವು ಅಭಿಪ್ರಾಯಪಟ್ಟರೆ, ನಿಯಮಿಸಲಾದ ಪ್ರಾಧಿಕಾರವು ಅವನಿಗೆ ನೀಡಿರುವ ಲೈಸೆನ್ಸನ್ನು 24ನೇ ಪ್ರಕರಣದ ಉಪಬಂಧಗಳಿಗೊಳಪಟ್ಟು ಅಮಾನತುಗೊಳಿಸಬಹುದು ಅಥವಾ ರದ್ದುಗೊಳಿಸಬಹುದು.

**36. ಉಗ್ರಾಣಪಾಲಕನು ಯಾವ ಸಂದರ್ಭದಲ್ಲಿ ಸರಕುಗಳ ತೂಕ, ದರ್ಜೆ ಅಥವಾ ವರ್ಗವನ್ನು ನಿರ್ಧರಿಸಬಹುದು.-** ಈ ಅಧಿನಿಯಮದ ಅಡಿಯಲ್ಲಿ ಲೈಸೆನ್ಸ್ ಪಡೆದ ತೂಕ ಮಾಡುವವರು, ಶ್ರೇಣಿಕಾರರು ಅಥವಾ ಮಾದರಿಗಳ ಪರೀಕ್ಷಕರು ಯಾವ ಪ್ರದೇಶಗಳಲ್ಲಿ ಇರುವುದಿಲ್ಲವೋ ಆ ಪ್ರದೇಶಗಳಲ್ಲಿ ರಸೀದಿಯಲ್ಲಿ ಒಳಗೊಳ್ಳುವ ಸರಕುಗಳ ತೂಕ, ಶ್ರೇಣಿ, ವರ್ಗ ಅಥವಾ ಗುಣಮಟ್ಟವು ಉಗ್ರಾಣಪಾಲಕನು ನಿರ್ಧರಿಸಿದಂತೆ ಇರತಕ್ಕದ್ದು.

**37. ಅಪೀಲನ್ನು ಯಾವ ಪ್ರಾಧಿಕಾರಕ್ಕೆ ಸಲ್ಲಿಸಬೇಕು.-** 29ನೇ ಪ್ರಕರಣದ ಅಡಿಯಲ್ಲಿನ ಅಪೀಲನ್ನು ರಾಜ್ಯ ಸರ್ಕಾರಕ್ಕೆ ಸಲ್ಲಿಸತಕ್ಕದ್ದು. ನಿಯಮಿಸಲಾದ ಪ್ರಾಧಿಕಾರದ ಆದೇಶವನ್ನು ಸ್ವೀಕರಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗಾಗಿ ಅಂಥ ಅಪೀಲನ್ನು ದಾಖಲ್ಮಾಡತಕ್ಕದ್ದು. ಅಂಥ ಗಡುವಿನ ಮುಕ್ತಾಯ, ಅಮಾನತು ಅಥವಾ ರದ್ದಿಯಾತಿಯ ಏಳು ದಿನಗಳೊಳಗಾಗಿ ಅದನ್ನು ಪ್ರಾಧಿಕಾರಕ್ಕೆ ಹಿಂದಿರುಗಿಸತಕ್ಕದ್ದು.

**38. ನೋಟೀಸುಗಳನ್ನು ನೀಡುವ ರೀತಿ.-** (1) 9ನೇ ಪ್ರಕರಣದ (1)ನೇ ಉಪ ಪ್ರಕರಣದ ಅಡಿಯಲ್ಲಿನ ಲೈಸೆನ್ಸನ್ನು ರದ್ದುಮಾಡುವ ಸಲುವಾಗಿ ನೀಡಬೇಕಾದ ನೋಟೀಸುಗಳು ಒಂದು ವಾರಕ್ಕಿಂತ ಕಡಿಮೆಯಿಲ್ಲದ ಅವಧಿಯದ್ದಾಗಿರತಕ್ಕದ್ದು ಮತ್ತು ಅದನ್ನು ರಿಜಿಸ್ಟರ್ಡ್ ಅಂಚೆಯ ಮೂಲಕ ಕಳುಹಿಸತಕ್ಕದ್ದು.

(2) 15 ನೇ ಪ್ರಕರಣದ (1) ನೇ ಉಪ ಪ್ರಕರಣದ ಅಡಿಯಲ್ಲಿ ಸರಕು ದಾಸ್ತಾನುದಾರನಿಗೆ ನೀಡಬೇಕಾದ ನೋಟೀಸು ಒಂದು ವಾರಕ್ಕಿಂತ ಕಡಿಮೆಯಿಲ್ಲದ ಅವಧಿಯದ್ದಾಗಿರತಕ್ಕದ್ದು ಮತ್ತು ಅದನ್ನು ರಿಜಿಸ್ಟರ್ಡ್ ಅಂಚೆಯ ಮೂಲಕ ಕಳುಹಿಸತಕ್ಕದ್ದು.

**39. ಉಗ್ರಾಣಪಾಲಕನು ಮಾನಕತೂಕ ಮತ್ತು ಅಳತೆಯನ್ನು ಬಳಸುವುದು.-** ಪ್ರತಿಯೊಬ್ಬ ಉಗ್ರಾಣಪಾಲಕನು, ಕರ್ನಾಟಕ ತೂಕ ಮತ್ತು ಅಳತೆ ಮಾನಕಗಳ (ಜಾರಿ) ಅಧಿನಿಯಮ, 1958ರ ಅಡಿಯಲ್ಲಿ ಆ ಉದ್ದೇಶಕ್ಕೆ ನೇಮಕ ಗೊಂಡ ಇನ್ಸ್‌ಪೆಕ್ಟರನು ಸರಿಯಾಗಿದೆಯೆಂದು ವಿಧ್ಯುಕ್ತವಾಗಿ ಪ್ರಮಾಣೀಕರಿಸಿದಂಥ ತಕ್ಕಡಿಗಳು, ತೂಕಗಳು ಮತ್ತು ಅಳತೆಗಳು ಮತ್ತು ತೂಕ ಮಾಡುವ ಅಥವಾ ಅಳತೆ ಮಾಡುವ ಯಂತ್ರಗಳನ್ನು ಮಾತ್ರ ಬಳಸತಕ್ಕದ್ದು. ಅವುಗಳನ್ನು ಪ್ರತಿ ಎರಡು ವರ್ಷಗಳಿಗೊಮ್ಮೆ ಸತ್ಯಾಪನೆ ಮಾಡತಕ್ಕದ್ದು ಮತ್ತು ಅವುಗಳಿಗೆ ಮುದ್ರೆ ಹಾಕತಕ್ಕದ್ದು.

**40. ಉಗ್ರಾಣಗಳ ವ್ಯವಹಾರದ ವೇಳೆ.-** ಪ್ರತಿಯೊಂದು ಉಗ್ರಾಣವನ್ನು, ಉಗ್ರಾಣ ವ್ಯವಹಾರ ನಡೆಸಲು ಅವಶ್ಯವಿರಬಹುದಾದಂತೆ ಯಾವುದೇ ಕೆಲಸದ ದಿನದಂದು ಪ್ರತಿದಿನ ಪೂರ್ವಾಹ್ನ 7.00 ರಿಂದ ಸಂಜೆ 7.00 ಗಂಟೆಯ ನಡುವೆ ಕನಿಷ್ಠ ಎಂಟು ಗಂಟೆಗಳ ಕಾಲ ತೆರೆದಿರತಕ್ಕದ್ದು. ವ್ಯವಹಾರವನ್ನು ನಡೆಸುವ ವಾಸ್ತವಿಕ ವೇಳೆಯನ್ನು ಪ್ರತಿಯೊಂದು ಉಗ್ರಾಣದಲ್ಲಿ ಎದ್ದುಕಾಣುವ ಸ್ಥಳದಲ್ಲಿ ಪ್ರದರ್ಶಿಸತಕ್ಕದ್ದು.

**41. ಉಗ್ರಾಣ ಪಾಲಕನು ವರದಿಗಳನ್ನು ಒದಗಿಸುವುದು.-** ಪ್ರತಿಯೊಬ್ಬ ಉಗ್ರಾಣಪಾಲಕನು, ಉಗ್ರಾಣದ ಸ್ಥಿತಿ ಮತ್ತು ಒಳಗಿರುವ ವಸ್ತುಗಳು ಮತ್ತು ಒಬ್ಬ ಉಗ್ರಾಣ ಪಾಲಕನಾಗಿ ತನ್ನ ವ್ಯವಹಾರದ ಕಾರ್ಯಾಚರಣೆಗಳಿಗೆ ಸಂಬಂಧಿಸಿದಂತೆ ನಿಯಮಿಸಲಾದ ಪ್ರಾಧಿಕಾರವು ಅಗತ್ಯಪಡಿಸಬಹುದಾದಂಥ ವರದಿಗಳನ್ನು ಕಾಲಕಾಲಕ್ಕೆ ಸಲ್ಲಿಸತಕ್ಕದ್ದು.

**ನಮೂನೆ ಸಂಖ್ಯೆ 1**

**(3ನೇ ನಿಯಮ ನೋಡಿ)**

**ಲೈಸೆನ್ಸಿನ ಮಂಜೂರಾತಿ / ನವೀಕರಣಕ್ಕಾಗಿ ನಿಯಮಿಸಲಾದ ಪ್ರಾಧಿಕಾರಕ್ಕೆ ಸಲ್ಲಿಸಬೇಕಾದ ಅರ್ಜಿ**

................

................. ಇವರಿಗೆ

**ಮಾನ್ಯರೆ,**

..................ಜಿಲ್ಲೆಯ ................. ತಾಲ್ಲೂಕಿನ .................ಇಲ್ಲಿ ವಾಸವಾಗಿರುವ ..........ಎಂಬ ಹೆಸರಿನ ನಾನು/ನಾವು ಉಗ್ರಾಣ ಪಾಲಕನ ಲೈಸೆನ್ಸನ್ನು ಮಂಜೂರು ಮಾಡಬೇಕೆಂದು ಕೋರುತ್ತೇನೆ/ಕೋರುತ್ತೇವೆ. ಸರಕು ದಾಸ್ತಾನು ಮಾಡುವುದಕ್ಕಾಗಿ .............. ರಲ್ಲಿ ನನಗೆ/ ನಮಗೆ ಮಂಜೂರಾದ, 31ನೇ ಮಾರ್ಚ್ 20 ...... ನೇ ವರ್ಷಕ್ಕೆ ಕೊನೆಗೊಳ್ಳುವ ಅವಧಿಗಾಗಿ ........ ಸಂಖ್ಯೆಯ ಲೈಸೆನ್ಸನ್ನು ನವೀಕರಿಸಬೇಕೆಂದು ಕೋರುತ್ತೇನೆ/ ಕೋರುತ್ತೇವೆ.

2. ನಾನು / ನಾವು, ಮಂಜೂರು ಮಾಡಬಹುದಾದ / ನವೀಕರಿಸಬಹುದಾದ ಲೈಸೆನ್ಸಿನಲ್ಲಿ ವಿಧಿಸಿರುವ ನಿಬಂಧನೆ ಮತ್ತು ಷರತ್ತುಗಳನ್ನು ಪಾಲಿಸುವುದಕ್ಕೆ ಒಪ್ಪಿಕೊಂಡಿದ್ದೇನೆ/ ಒಪ್ಪಿಕೊಂಡಿದ್ದೇವೆ.

3. ನಾನು / ನಾವು, ...............ರೂ.ಗಳ ಲೈಸೆನ್ಸ್ ಫೀಜನ್ನು ಸಂದಾಯ ಮಾಡಿದ ನಗದು ಅಥವಾ ಖಜಾನೆ ಚಲನ್ನಿನ ಸ್ಟಾಂಪ್ ಅನ್ನು ಅಂಟಿಸಿದ್ದೇನೆ/ ಅಂಟಿಸಿದ್ದೇವೆ.

4. ನಾನು / ನಾವು, ಕರ್ನಾಟಕ ಉಗ್ರಾಣಗಳ ನಿಯಮಗಳು, 1969ರ 7ನೇ ನಿಯಮದ ಅಡಿಯಲ್ಲಿ ನಿಯಮಿಸಲಾದ ರೀತಿಯಲ್ಲಿ ಅಗತ್ಯಪಡಿಸಿದ ಮೊಬಲಗಿನ ಭದ್ರತಾಪತ್ರವನ್ನು ಬರೆದುಕೊಡುವುದಕ್ಕೆ ಜವಾಬ್ದಾರನಾಗಿರುತ್ತೇನೆ/ ಜವಾಬ್ದಾರರಾಗಿರುತ್ತೇವೆ.

5. ನಾನು / ನಾವು, ಉಗ್ರಾಣದಲ್ಲಿ ದಾಸ್ತಾನು ಮಾಡಿರುವ ಸರಕುಗಳ ಸಂಬಂಧದಲ್ಲಿ ಸರಕು ದಾಸ್ತಾನುದಾರರಿಂದ ವಸೂಲು ಮಾಡಲಾಗುವ ಶುಲ್ಕಗಳ ಪಟ್ಟಿಯನ್ನು ಅರ್ಜಿಯೊಂದಿಗೆ ಸೇರಿಸಿದ್ದೇನೆ/ ಸೇರಿಸಿದ್ದೇವೆ.

6. ನಾನು/ ನಾವು, ಕರ್ನಾಟಕ ಉಗ್ರಾಣಗಳ ಅಧಿನಿಯಮ, 1961ರ, ಕರ್ನಾಟಕ ಉಗ್ರಾಣಗಳ ನಿಯಮಗಳು, 1969ರ ಉಪಬಂಧಗಳನ್ನು ಮತ್ತು ಒಂದು ಉಗ್ರಾಣದ ನಿರ್ವಹಣೆ, ಇತ್ಯಾದಿಗೆ ಸಂಬಂಧಿಸಿದ ನಿಬಂಧನೆಗಳು ಮತ್ತು ಷರತ್ತುಗಳನ್ನು ಮತ್ತು ನಿಯಮಿಸಲಾದ ಪ್ರಾಧಿಕಾರವು ಅಥವಾ ಈ ಸಂಬಂಧದಲ್ಲಿ ಅವರು ಅಧಿಕೃತಗೊಳಿಸಬಹುದಾದಂಥ ಇತರ ಅಧಿಕಾರಿಯು ಸದರಿ ವ್ಯವಹಾರಕ್ಕೆ ಸಂಬಂಧಿಸಿದಂತೆ ಹೊರಡಿಸಿದ ಯಾವುವೇ ಇತರ ಆಡಳಿತಾತ್ಮಕ ಆದೇಶಗಳನ್ನು ಅಥವಾ ಇತರ ಆದೇಶಗಳನ್ನು ಪಾಲಿಸುವುದಕ್ಕೆ ಬದ್ಧವಾಗಿರಲು ಒಪ್ಪಿದ್ದೇನೆ/ ಒಪ್ಪಿದ್ದೇವೆ.

7. ನಾನು / ನಾವು,................... ರೂ.ಗಳಷ್ಟರ ಒಂದು ಧನಾನುಕೂಲತೆ ಪ್ರಮಾಣಪತ್ರವನ್ನು ಇದರೊಂದಿಗೆ ಲಗತ್ತಿಸಿದ್ದೇನೆ / ಲಗತ್ತಿಸಿದ್ದೇವೆ.

8. ನಾನು / ನಾವು, ಇಲ್ಲಿ ನೀಡಿರುವ ಎಲ್ಲ ಮಾಹಿತಿಗಳು ನನ್ನ / ನಮ್ಮ ತಿಳಿವಳಿಕೆಯ ಮಟ್ಟಿಗೆ ಸತ್ಯವಾಗಿವೆಯೆಂದು ಮತ್ತು ಅವು ಅಸತ್ಯವೆಂದು ಸಾಬೀತಾದ ಸಂದರ್ಭದಲ್ಲಿ, ನಾನು/ನಾವು, ಅಂಥ ಸುಳ್ಳು ಅಥವಾ ಅಸತ್ಯವಾದ ಮಾಹಿತಿಯಿಂದ ಉಂಟಾಗುವ ಯಾವುದೇ ನಷ್ಟದ ವಿರುದ್ಧ ಈ ವ್ಯವಹಾರಕ್ಕೆ ಸಂಬಂಧಿಸಿದ ವ್ಯಕ್ತಿಗಳಿಗೆ ನಷ್ಟಭರ್ತಿ ಮಾಡಿಕೊಡಲು ಜವಾಬ್ದಾರರಾಗಿರುವುದಾಗಿ ಶ್ರದ್ಧಾಪೂರ್ವಕವಾಗಿ ಈ ಮೂಲಕ ಘೋಷಿಸುತ್ತೇನೆ/ ಘೋಷಿಸುತ್ತೇವೆ.

9. ನಾನು / ನಾವು, ಈ ಮುಂದೆ ನಿರ್ದಿಷ್ಟಪಡಿಸಲಾಗಿರುವ ಉಗ್ರಾಣಗಳ ಪೈಕಿ ಪ್ರತಿಯೊಂದು ಉಗ್ರಾಣವು, ಅದರ ಮುಂದೆ ಅನುಕ್ರಮವಾಗಿ ನಮೂದಿಸಲಾಗಿರುವ ಸರಕುಗಳನ್ನು ದಾಸ್ತಾನು ಮಾಡುವುದಕ್ಕೆ ಸೂಕ್ತವಾಗಿದೆ ಮತ್ತು ಅದು ಉತ್ತಮ ಸ್ಥಿತಿಯಲ್ಲಿದೆ ಎಂದು ಘೋಷಿಸುತ್ತೇನೆ/ ಘೋಷಿಸುತ್ತೇವೆ.

ಸಹಿ

ಉಗ್ರಾಣವಾಗಿ/ ಉಗ್ರಾಣಗಳಾಗಿ ಬಳಸಲಾಗುವ ಆವರಣದ ವಿವರಣೆ

ದಿನಾಂಕ: ...................... ಜಿಲ್ಲೆ

1. ಗ್ರಾಮ ಅಥವಾ ಪಟ್ಟಣ

2. ಕಟ್ಟಡ ಸಂಖ್ಯೆ

| | | |
|---|---|---|
| 3. ಉಗ್ರಾಣದ ಮತ್ತು ದಾಸ್ತಾನಿಗಾಗಿ ಇರುವ ಕೊಠಡಿಗಳ ವಿವರಣೆ | ಪ್ರತಿಯೊಂದರ ವಿಶಿಷ್ಟ ಅಕ್ಷರ ಅಥವಾ ಸಂಖ್ಯೆ ಅಥವಾ ಪತ್ರ ಮತ್ತು ಸಂಖ್ಯೆ | ಪ್ರತಿಯೊಂದರ ಉದ್ದೇಶದ ವ್ಯಾಪಕ ವಿವರಣೆ |

4. ವಾಸ್ತವಿಕ ಬಳಕೆ ಪ್ರದೇಶ ಮತ್ತು ದಾಸ್ತಾನು ಸ್ಥಳಾವಕಾಶ

5. ಯಾವ ಸರಕುಗಳನ್ನು ದಾಸ್ತಾನು ಮಾಡಲು ಉಪಯೋಗಿಸಬೇಕಾಗಿದೆಯೋ ಆ ಸರಕುಗಳ ದಾಸ್ತಾನಿನ ಸಂಬಂಧದಲ್ಲಿ ಸೂಕ್ತತೆ

6. ಕಳೆದ ವರ್ಷದಲ್ಲಿ ದಾಸ್ತಾನು ಮಾಡಲಾಗಿದ್ದ ಬೇರೆಬೇರೆ ಸರಕುಗಳ ಪರಿಮಾಣಗಳು

7. ಲೈಸೆನ್ಸಿನ ಅವಧಿಯಲ್ಲಿ ದಾಸ್ತಾನು ಮಾಡಬೇಕಾದ ಸರಕುಗಳ ಅಂದಾಜು ಪರಿಮಾಣ.

ನಮೂನೆ ಸಂಖ್ಯೆ 2

(2 ಮತ್ತು 3ನೇ ನಿಯಮಗಳನ್ನು ನೋಡಿ)

**ದ್ವಿಪ್ರತಿ ಲೈಸೆನ್ಸ್ ನೀಡಿಕೆಗಾಗಿ ನಿಯಮಿಸಲಾದ ಪ್ರಾಧಿಕಾರಕ್ಕೆ ಅರ್ಜಿ**

**................**

**.................ಇವರಿಗೆ**

**ಮಾನ್ಯರೆ,**

................ ಜಿಲ್ಲೆಯ ................ತಾಲ್ಲೂಕಿನ ................ಇಲ್ಲಿ ವಾಸವಾಗಿರುವ ................ಎಂಬ ನಾನು/ ನಾವು................ ರಂದು ಕೊನೆಗೊಳ್ಳುವ ಅವಧಿಗೆ .......... ಪ್ರದೇಶಕ್ಕಾಗಿ ......... ರಂದು ಮಂಜೂರು ಮಾಡಿದ್ದ ನನ್ನ/ ನಮ್ಮ................ಸಂಖ್ಯೆಯ ಉಗ್ರಾಣ ಲೈಸೆನ್ಸ್ ಈ ಮುಂದೆ ಕಾಣಿಸಿದ ಸನ್ನಿವೇಶಗಳಲ್ಲಿ ಕಳೆದುಹೋಗಿದೆ / ನಾಶವಾಗಿದೆ ಎಂದು ಮನವಿ ಮಾಡಿಕೊಳ್ಳುತ್ತೇನೆ / ಮಾಡಿಕೊಳ್ಳುತ್ತೇವೆ.

(ಲೈಸೆನ್ಸ್ ಕಳೆದುಹೋದಂಥ / ನಾಶವಾದಂಥ ಸನ್ನಿವೇಶವನ್ನು ಇಲ್ಲಿ ನಮೂದಿಸಬೇಕು).

2. ಆದ್ದರಿಂದ ................ ಎಂಬ ನಾನು/ ನಾವು ಮೇಲೆ ಹೇಳಿದ ಲೈಸೆನ್ಸನ್ನು ಯಾವ ನಿಬಂಧನೆಗಳು ಮತ್ತು ಷರತ್ತುಗಳ ಮೇಲೆ ಮಂಜೂರು ಮಾಡಲಾಗಿತ್ತೋ ಆ ನಿಬಂಧನೆಗಳ ಮತ್ತು ಷರತ್ತುಗಳ ಮೇಲೆ ಒಂದು ದ್ವಿಪ್ರತಿ ಲೈಸೆನ್ಸನ್ನು ಮಂಜೂರು ಮಾಡಬೇಕಾಗಿ ಕೋರುತ್ತೇನೆ/ ಕೋರುತ್ತೇವೆ.

3. ..................ಎಂಬ ನಾನು/ನಾವು, 5 ರೂ. ಫೀಜನ್ನು ಸಂದಾಯ ಮಾಡಿರುವ ಬಗ್ಗೆ ಸ್ಟಾಂಪನ್ನು ಅಂಟಿಸಿದ್ದೇನೆ/ ಅಂಟಿಸಿದ್ದೇವೆ.

4. ..................ಎಂಬ ನಾನು/ ನಾವು, ಇಲ್ಲಿ ನೀಡಿರುವ ಮಾಹಿತಿಯು ನನಗೆ/ನಮಗೆ ತಿಳಿದಿರುವ ಮಟ್ಟಿಗೆ ಸತ್ಯವಾಗಿದೆ ಎಂದು ಶ್ರದ್ಧಾಪೂರ್ವಕವಾಗಿ ಘೋಷಿಸುತ್ತೇನೆ/ ಘೋಷಿಸುತ್ತೇವೆ.

ಸಾಕ್ಷಿಗಳು: 1)

2)

ದಿನಾಂಕ: ಉಗ್ರಾಣಪಾಲಕನ ಸಹಿ

## ನಮೂನೆ ಸಂಖ್ಯೆ 3

(7ನೇ ನಿಯಮ ನೋಡಿ)

### ಭದ್ರತಾ ಪತ್ರದ ನಮೂನೆ

............ ಜಿಲ್ಲೆಯ .................ತಾಲ್ಲೂಕಿನ ................ ಇಲ್ಲಿಯ ನಿವಾಸಿಯಾಗಿರುವ ................ ಎಂಬ ನಾನು/ ನಾವು, ನಿಯಮಿಸಲಾದ ಪ್ರಾಧಿಕಾರವು ವಿಧಿಸಬಹುದಾದಂಥ ಷರತ್ತುಗಳಿಗೊಳಪಟ್ಟು, ಕರ್ನಾಟಕ ಉಗ್ರಾಣಗಳ ಅಧಿನಿಯಮ, 1961ರ (1962ರ ಕರ್ನಾಟಕ ಅಧಿನಿಯಮ ಸಂಖ್ಯೆ 11) ಅಡಿಯಲ್ಲಿ ................ ಇಲ್ಲಿ ಉಗ್ರಾಣ ಪಾಲಕನಾಗಿರಲು ಲೈಸೆನ್ಸ್ ಮಂಜೂರು ಮಾಡುವಂತೆ ಕೋರಿ ಅರ್ಜಿ ಸಲ್ಲಿಸಿರುವುದರಿಂದ, ಉಗ್ರಾಣ ಪಾಲಕನಾಗಿ ನನ್ನ / ನಮ್ಮ ವ್ಯವಹಾರದಿಂದ ಉದ್ಭವಿಸುವ ಷರತ್ತುಗಳನ್ನು ಪಾಲಿಸಲು ಮತ್ತು ಹೊಣೆಗಾರಿಕೆಗಳನ್ನು ಪಾಲಿಸಲು ಕರ್ನಾಟಕ ಉಗ್ರಾಣಗಳ ನಿಯಮಗಳು, 1969ರ 7ನೇ ನಿಯಮದಲ್ಲಿ ನಿಯಮಿಸಲಾದ ದರಗಳಿಗೆ ಅನುಸಾರವಾಗಿ ನಗದು/ಸರ್ಕಾರಿ ಭದ್ರತಾ ಪತ್ರಗಳ ರೂಪದಲ್ಲಿ ನಾನು / ನಾವು ................ ರೂ.ಗಳ ಭದ್ರತಾ ಠೇವಣಿಯನ್ನು, ಈ ಮೂಲಕ ಒದಗಿಸಿದ್ದೇನೆ/ ಒದಗಿಸಿದ್ದೇವೆ ಮತ್ತು ಈ ಬಂಧಪತ್ರದ ಅಡಿಯಲ್ಲಿ ನಾನು / ನಾವು ಠೇವಣಿ ಇಟ್ಟಿರುವ ಭದ್ರತಾ ಮೊತ್ತವು, ಲೈಸೆನ್ಸಿನ ಯಾವುದೇ ಷರತ್ತನ್ನು ಪಾಲಿಸಲು ತಪ್ಪಿದಲ್ಲಿ ಅಥವಾ ಈ ಅಧಿನಿಯಮದ ಅಥವಾ ನಿಯಮದ ಯಾವುದೇ ಉಪಬಂಧವನ್ನು ಉಲ್ಲಂಘಿಸಿದಲ್ಲಿ ಸರ್ಕಾರದಿಂದ ಮುಟ್ಟುಗೋಲಾಗಲು ಬದ್ಧವಾಗಿರತಕ್ಕದ್ದೆಂದು ಮತ್ತು ಈ ಬಂಧಪತ್ರದ ಅಡಿಯಲ್ಲಿ ಬಾಕಿ ಇರುವ ಮೊತ್ತವು, ನನ್ನಿಂದ / ನಮ್ಮಿಂದ ಅಥವಾ ನನ್ನ / ನಮ್ಮ ವಾರಸುದಾರರಿಂದ ಅಥವಾ ಕಾನೂನು ಸಮ್ಮತ ಪ್ರತಿನಿಧಿಗಳಿಂದ ಭೂ ಕಂದಾಯದ ಬಾಕಿಯಂತೆ ವಸೂಲಾಗತಕ್ಕದ್ದೆಂದು ಒಪ್ಪಿಗೆ ನೀಡುತ್ತೇನೆ/ ನೀಡುತ್ತೇವೆ.

ಸಾಕ್ಷಿದಾರರ ಸಹಿ ಉಗ್ರಾಣಪಾಲಕನ ಸಹಿ

................ನ ................ ಮತ್ತು ................ ಎಂಬ ನಾವು ಸದರಿ ................ಗಾಗಿ ಜಾಮೀನುದಾರರಾಗಿದ್ದೇವೆ, ಮತ್ತು ಸದರಿ ................ನು ಉಗ್ರಾಣಪಾಲಕನಾಗಿ ಅವನ ವ್ಯವಹಾರದಿಂದ ಉದ್ಭವಿಸುವ ಷರತ್ತುಗಳು ಮತ್ತು ಹೊಣೆಗಾರಿಕೆಗಳನ್ನು ಪಾಲಿಸಲು ತಪ್ಪಿದ ಸಂದರ್ಭದಲ್ಲಿ ಸದರಿ ಬಂಧಪತ್ರದ ಮೇರೆಗೆ ಬಾಕಿಯಿರುವ ಭದ್ರತಾ ಠೇವಣಿ ಮೊತ್ತವನ್ನು, ಸರ್ಕಾರವು, ನಮ್ಮಿಂದ ಅಥವಾ ನಮ್ಮ ವಾರಸುದಾರರಿಂದ ಅಥವಾ ಕಾನೂನು ಸಮ್ಮತ ಪ್ರತಿನಿಧಿಗಳಿಂದ ಜಂಟಿಯಾಗಿ ಮತ್ತು ಪ್ರತ್ಯೇಕವಾಗಿ ವಸೂಲಾಗತಕ್ಕದ್ದೆಂದು ನಾವು ಈ ಮೂಲಕ ಒಪ್ಪಿಗೆ ನೀಡುತ್ತೇವೆ.

................ದಿನಾಂಕ ................ತಿಂಗಳು ................ವರ್ಷ

ಸಾಕ್ಷಿದಾರರ ಸಹಿ ಜಾಮೀನುದಾರರ ಸಹಿ

## ನಮೂನೆ ಸಂಖ್ಯೆ 4

(11ನೇ ನಿಯಮ ನೋಡಿ)

### ಸರಕುಗಳನ್ನು ದಾಸ್ತಾನು ಇಡುವುದಕ್ಕೆ ಅರ್ಜಿ

**ಉಗ್ರಾಣ ಪಾಲಕ**

**ಇವರಿಗೆ,**

**ಮಾನ್ಯರೆ,**

ಈ ಮುಂದಿನ ಸರಕುಗಳನ್ನು ದಯವಿಟ್ಟು ಸ್ವೀಕರಿಸಿ:

| ಸರಕುಗಳ ವಿವರಣೆ | ಮೂಟೆಗಳ, ಚೀಲಗಳ ಸಂಖ್ಯೆ ಮತ್ತು ಪರಿಮಾಣಗಳು ಹಾಗೂ ವಿಶಿಷ್ಟ ಗುರುತುಗಳು ಯಾವುದಾದರೂ ಇದ್ದರೆ ಅವು | ಅಳತೆ ಅಥವಾ/ಮತ್ತು ತೂಕ | ಮಾರುಕಟ್ಟೆ ಬೆಲೆ | ಸರಕುಗಳ ಒಟ್ಟು ಮೌಲ್ಯ ನಿರ್ಧರಣೆ | ಷರಾ ಯಾವುದಾದರೂ ಇದ್ದರೆ |
|---|---|---|---|---|---|
| | | | | | |

ಮೇಲೆ ಹೆಸರಿಸಿರುವ ಸರಕುಗಳು ನನ್ನ ಸ್ವಂತ ಸ್ವತ್ತುಗಳಾಗಿರುತ್ತವೆ ಎಂದು ಮತ್ತು ಇತರ ಯಾರೇ ವ್ಯಕ್ತಿಯು ಅವುಗಳ ಮೇಲೆ ಯಾವುದೇ ಕ್ಲೇಮು ಹೊಂದಿಲ್ಲವೆಂದು ನಾನು ಈ ಮೂಲಕ ಪ್ರಮಾಣೀಕರಿಸುತ್ತೇನೆ. (ಯಜಮಾನನ ಪರವಾಗಿ ಒಬ್ಬ ಏಜೆಂಟನು ಸರಕುಗಳನ್ನು ದಾಸ್ತಾನು ಇಡುವುದಾದಲ್ಲಿ, ನಮೂನೆಯು ಈ ಮುಂದಿನಂತಿರತಕ್ಕದ್ದು).

ಮೇಲೆ ನಮೂದಿಸಲಾದ ಸರಕುಗಳು ಶ್ರೀ ................. ಎಂಬುವರ ಸ್ವತ್ತುಗಳಾಗಿರುತ್ತವೆಯೆಂದು ಮತ್ತು ಮಾಲೀಕನ ಒಪ್ಪಿಗೆಯೊಂದಿಗೆ ಸದರಿ ಸರಕುಗಳನ್ನು ಸ್ವಾಧೀನ ಪಡೆದಿದ್ದೇನೆಂದು ಮತ್ತು ಇತರ ಯಾರೇ ವ್ಯಕ್ತಿಯು ಅವುಗಳ ಮೇಲೆ ಯಾವುದೇ ಕ್ಲೇಮು ಹೊಂದಿಲ್ಲವೆಂದು ನಾನು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ತಮ್ಮ ವಿಶ್ವಾಸಿ,

ಸರಕು ದಾಸ್ತಾನುದಾರ/ ಏಜೆಂಟ್

ಈ ಸರಕುಗಳ ಲಿಖಿತ ವಿವರಣೆಯನ್ನು, ಅವುಗಳ ಶ್ರೇಣಿಯನ್ನು ಅಥವಾ ಪರಿಮಾಣವನ್ನು ಮತ್ತು ತೂಕಗಳನ್ನು ಮತ್ತು / ಅಥವಾ ಅಳತೆಗಳನ್ನು ಮತ್ತು ಬೆಲೆಯನ್ನು ನಾನು ಸರಿನೋಡಿದ್ದೇನೆಂದು ಮತ್ತು / ಅಥವಾ ಅವು ಸರಿಯಾಗಿವೆ ಎಂದು ಪ್ರಮಾಣೀಕರಿಸಲಾಗಿದೆ.

ಸ್ಥಳ:

ದಿನಾಂಕ: ಉಗ್ರಾಣಪಾಲಕನ ಸಹಿ

ನಮೂನೆ ಸಂಖ್ಯೆ 5

(11ನೇ ನಿಯಮ ನೋಡಿ)

**ಸರಕು ಹಿಂದಿರುಗಿಸುವ ಆದೇಶಕ್ಕಾಗಿ ಅರ್ಜಿ**

ಉಗ್ರಾಣ ಪಾಲಕ,

...................... ಇವರಿಗೆ

ಮಾನ್ಯರೆ,

ಈ ಮುಂದೆ ವಿವರಿಸಲಾಗಿರುವ ಸರಕುಗಳನ್ನು ದಯವಿಟ್ಟು ನನಗೆ ಅಥವಾ ...................... ಇವರಿಗೆ ಹಿಂದಿರುಗಿಸಿ. ಈ ಸರಕುಗಳನ್ನು ......................ರಂದು ನಿಮ್ಮಲ್ಲಿ ದಾಸ್ತಾನು ಇಡಲಾಗಿತ್ತು. ನೀವು ನೀಡಿದ್ದ ದಾಸ್ತಾನು ರಸೀದಿಯನ್ನು ಈ ಅರ್ಜಿಯೊಂದಿಗೆ ಲಗತ್ತಿಸಲಾಗಿದೆ.

**ಹಿಂದಿರುಗಿಸಬೇಕಾಗಿರುವ ಸರಕುಗಳ ವಿವರ**

| ಸರಕುಗಳ ವಿವರ | ಮೂಟೆಗಳು, ಇತ್ಯಾದಿಗಳ ಸಂಖ್ಯೆ | ತೂಕ ಅಥವಾ/ ಮತ್ತು ಅಳತೆ (ಅಂಕಿಗಳು ಮತ್ತು ಅಕ್ಷರಗಳಲ್ಲಿ) | ಮಾರುಕಟ್ಟೆ ಬೆಲೆ | ವಿಶೇಷ ಗುರುತುಗಳು, ಯಾವುವಾದರೂ ಇದ್ದರೆ | ಷರಾ |
|---|---|---|---|---|---|
| | | | | | |

ತಮ್ಮ ವಿಶ್ವಾಸಿ,

ಸರಕು ದಾಸ್ತಾನುದಾರ.

ಮೇಲೆ ಸೂಚಿಸಿದ ಸರಕುಗಳನ್ನು ................ ಸ್ಥಿತಿಯಲ್ಲಿ ಸ್ವೀಕರಿಸಲಾಗಿದೆ.

ಸ್ಥಳ:

ದಿನಾಂಕ: ಸರಕು ದಾಸ್ತಾನುದಾರ.

**ನಮೂನೆ ಸಂಖ್ಯೆ 6**
**(12ನೇ ನಿಯಮ ನೋಡಿ)**
**.................. ಉಗ್ರಾಣ ನಿಗಮ**
**ವರ್ಗಾವಣೀಯ / ವರ್ಗಾವಣೀಯವಲ್ಲದ ಉಗ್ರಾಣ ರಸೀದಿ**

ರಸೀದಿ ಕ್ರಮ ಸಂಖ್ಯೆ ....................
ಉಗ್ರಾಣ ಸಂಖ್ಯೆ ಮತ್ತು ಅದು ಇರುವ ಸ್ಥಳ ....................
ಉಗ್ರಾಣ ಪಾಲಕನ ಲೈಸೆನ್ಸ್ ಸಂಖ್ಯೆ ............
................ ರ ವರೆಗೆ ಮಾನ್ಯವಾಗಿದೆ
ಯಾರಿಂದ ಸ್ವೀಕರಿಸಲಾಗಿದೆ (ದಾಸ್ತಾನುದಾರನ ಹೆಸರು ಮತ್ತು ವಿಳಾಸ)
.............................................
ಈ ಮುಂದೆ ವಿವರಿಸಲಾದ ಸರಕುಗಳು:

| ವಿಧ | ವರ್ಗ ಅಥವಾ ಮಾನಕ ಗುಣಮಟ್ಟ ಮತ್ತು / ಅಥವಾ ಶ್ರೇಣಿ | ಮೂಟೆಗಳ ಅಥವಾ ಲಾಟುಗಳ ಸಂಖ್ಯೆ ಮತ್ತು ಶ್ರೇಣಿ | ತೂಕ ಅಥವಾ ಅಳತೆಯ ಮೂಲಕ ಒಟ್ಟು ಪರಿಮಾಣ ಕಿಲೋಗಳಲ್ಲಿ | ತೂಕ ಮಾಡುವವನ/ ಶ್ರೇಣಿಕಾರನ / ಮಾದರಿ ಪರೀಕ್ಷಕನ ಹೆಸರು ಮತ್ತು / ಅಥವಾ ಲೈಸೆನ್ಸ್ ಸಂಖ್ಯೆ |
|---|---|---|---|---|
| | | | | |

ಸರಕುಗಳ ಸ್ಥಿತಿ: (1) ಉತ್ತಮ
(2) ಮಧ್ಯಮ
(3) ಸಾಮಾನ್ಯ

ಮೂಟೆಗಳ ಮೇಲೆ ಸರಕು ದಾಸ್ತಾನುದಾರನ ಖಾಸಗಿ ಗುರುತುಗಳು, ಯಾವುವಾದರೂ ಇದ್ದರೆ, ಅವು ..................
ದಾಸ್ತಾನು ಇಡುವುದಕ್ಕೆ ಸಂಬಂಧಪಟ್ಟ ದರ ಮತ್ತು ಇತರ ಶುಲ್ಕಗಳು ........................................
ಬೆಂಕಿ / ಪ್ರವಾಹ / ಕಳ್ಳತನ / ಕನ್ನಗಳ್ಳತನ / ಮುಷ್ಕರ / ದೊಂಬಿ, ಇತರ ಕಾರಣಗಳಿಗಾಗಿ ..................... ರೊಂದಿಗೆ ಮಾಡಿಕೊಂಡ ನಷ್ಟಭರ್ತಿ ಪರಿಹಾರ / ವಿಮೆ.
ವಿಮಾ ಕಂಪನಿಯ ಹೆಸರು (ವಿಮೆ ಮಾಡಿಸಿದ್ದಲ್ಲಿ) ..................
................ ವಿಮೆ ಮಾಡಿಸಿದ ಮೊಬಲಗು............................................. ರೂ.ಗಳು
.................. ರಿಂದ ..................ಅವಧಿಯವರೆಗೆ ದಾಸ್ತಾನು ಇಟ್ಟುಕೊಳ್ಳಲು ಸರಕುಗಳನ್ನು ಸ್ವೀಕರಿಸಲಾಗಿದೆ.
ದಾಸ್ತಾನು ಮಾಡಿದ ಕಾಲಕ್ಕೆ ಇರುವ ಮಾರುಕಟ್ಟೆ ದರ .................. (ಮೌಲ್ಯ ನಿರ್ಧರಣೆ)
ದಿನಾಂಕ: ಉಗ್ರಾಣ ಪಾಲಕನ ಅಥವಾ ಅವನ ಏಜೆಂಟನ ಸಹಿ

ಈ ಮುಂದೆ ನಮೂದಿಸಲಾಗಿರುವ ಸರಕುಗಳನ್ನು ಉಗ್ರಾಣದಿಂದ ಹಿಂದಿರುಗಿಸುವ ಸಲುವಾಗಿ ರಸೀದಿಯಿಂದ ಈ ಮೂಲಕ ಮುಕ್ತಗೊಳಿಸಲಾಗಿದೆ. ಮುಕ್ತಗೊಳಿಸದೆ ಬಾಕಿಯಿರುವ ಯಾವುವೇ ಸರಕುಗಳು, ಮುಕ್ತಗೊಳಿಸಲಾದ ಭಾಗದ ಮೇಲಿನ ಸಂದಾಯ ಮಾಡಿಲ್ಲದ ಶುಲ್ಕಗಳಿಗಾಗಿ ಮತ್ತು ಮುಂಗಡಗಳಿಗಾಗಿ ಧಾರಣಾಧಿಕಾರಕ್ಕೆ ಒಳಪಟ್ಟಿರುತ್ತವೆ.

| ದಿನಾಂಕ | ಪರಿಮಾಣ | ಮುಕ್ತಗೊಳಿಸಲಾದುದು | ಸಹಿ | ರಸೀದಿಯ ಮೇಲೆ ಬಾಕಿಯಿರುವ ಪರಿಮಾಣ |
|---|---|---|---|---|
| | | | | |

## ದಾಸ್ತಾನಿನ ಷರತ್ತುಗಳು

**1. ದಾಸ್ತಾನಿಗಾಗಿ ಟೆಂಡರು:–** (ಎ) ದಾಸ್ತಾನು ಮಾಡುವ ಸಲುವಾಗಿ ಇರುವ ಎಲ್ಲ ಸರಕುಗಳನ್ನು ಸೂಕ್ತವಾಗಿ ಗುರುತುಮಾಡಿ ಮತ್ತು ಅವುಗಳನ್ನು ಒಯ್ಯಲು ಅನುಕೂಲವಾಗುವಂತೆ ಮೂಟೆ ಕಟ್ಟಿ ಉಗ್ರಾಣದ ವಶಕ್ಕೆ ಒಪ್ಪಿಸತಕ್ಕದ್ದು. ಉಗ್ರಾಣಪಾಲಕನು ಮೂಟೆಗಳನ್ನು "ಪಾಲ" ಮಾಡುವುದು ಮತ್ತು ಪ್ರಮಾಣ ನಿಷ್ಕರ್ಷೆ ಮಾಡುವುದು ಮತ್ತು ಬದಲಾಯಿಸುವುದು ಅಗತ್ಯವೆಂದು ಪರಿಗಣಿಸಿದ ಸಂದರ್ಭದಲ್ಲಿ ಅವನು ಹಾಗೆ ಮಾಡುವುದಕ್ಕೆ ಹಕ್ಕುಳ್ಳವನಾಗಿರತಕ್ಕದ್ದು ಮತ್ತು ಸರಕು ದಾಸ್ತಾನುದಾರರು, ಆ ಸಂಬಂಧದಲ್ಲಿ ತಗಲುವ ವೆಚ್ಚಗಳನ್ನು ಸಂದಾಯ ಮಾಡಲು ಹೊಣೆಗಾರರಾಗಿರತಕ್ಕದ್ದು. ಉಗ್ರಾಣಪಾಲಕನು, ತನ್ನ ವಿವೇಚನಾನುಸಾರ, ದಾಸ್ತಾನು ಮಾಡಲಾಗದ ಸ್ಥಿತಿಯಲ್ಲಿರುವ ಸರಕುಗಳನ್ನು ಸ್ವೀಕರಿಸಲು ನಿರಾಕರಿಸಬಹುದು. ಉಗ್ರಾಣಪಾಲಕನು, ಪ್ರತಿಯೊಂದು ಮೂಟೆಗೆ ಗುರುತು ಚಿಹ್ನೆ ನೀಡತಕ್ಕದ್ದು.

(ಬಿ) ಇಲ್ಲಿ ಬಳಸಲಾಗಿರುವ "ಲಾಟು" ಎಂಬ ಪದಕ್ಕೆ ಉಗ್ರಾಣ ಪಾಲಕನು ಪ್ರತ್ಯೇಕವಾಗಿ ಲೆಕ್ಕ ಇಡಬೇಕಾಗಿರುವಂಥ ಸರಕುಗಳ ಘಟಕ ಅಥವಾ ಘಟಕಗಳು ಎಂಬ ಅರ್ಥವಿರತಕ್ಕದ್ದು. ವಿಶೇಷ ವ್ಯವಸ್ಥೆಯ ಹೊರತಾಗಿ ಮತ್ತು ಅಂಥ ಸಂದರ್ಭದಲ್ಲಿ ಒಂದು ಚಾರ್ಜಿಗೆ ಒಳಪಟ್ಟ ಹೊರತಾಗಿ, ತರುವಾಯ ಆಯ್ದು ತೆಗೆಯಲು ಅವಕಾಶವಿಲ್ಲದಂತೆ ಲಾಟಿನ ಎಲ್ಲ ಅಥವಾ ಯಾವುವೇ ಘಟಕಗಳನ್ನು ವಶಕ್ಕೆ ಒಪ್ಪಿಸತಕ್ಕದ್ದು.

(ಸಿ) ಸರಕು ದಾಸ್ತಾನುದಾರ ಮತ್ತು ಉಗ್ರಾಣ ಪಾಲಕನ ನಡುವೆ ಲಿಖಿತದಲ್ಲಿ ಆದ ವ್ಯವಸ್ಥೆಯ ಮೂಲಕ ಇತರ ರೀತಿಯಲ್ಲಿ ಅವಕಾಶ ಮಾಡಿಕೊಂಡ ಹೊರತಾಗಿ, ಉಗ್ರಾಣಪಾಲಕನು, ಸರಕುಗಳನ್ನು ಮೂಲತಃ ಸ್ವೀಕರಿಸಿದಂಥ ಮೂಟೆಗಳಲ್ಲಿ ಮಾತ್ರ ಸರಕುಗಳನ್ನು ದಾಸ್ತಾನು ಮಾಡಲು ಮತ್ತು ಹಿಂದಿರುಗಿಸಲು ಜವಾಬ್ದಾರನಾಗಿರುತ್ತಾನೆ.

2. **ದಾಸ್ತಾನು ಚಾರ್ಜು.-** ತಿಂಗಳ ಲೆಕ್ಕವನ್ನು ಆಧರಿಸಿ ದಾಸ್ತಾನು ಚಾರ್ಜನ್ನು ವಿಧಿಸಲಾಗುವುದು ಮತ್ತು ತಿಂಗಳನ್ನು ಮೀರಿ ದಾಸ್ತಾನು ಇಡಲಾದ ಹೆಚ್ಚುವರಿ ದಿನಗಳ ಸಂಖ್ಯೆಯನ್ನು, ವಾರದ ಲೆಕ್ಕವನ್ನು ಆಧರಿಸಿ ಚಾರ್ಜು ಮಾಡಲಾಗುವುದು. ಅನ್ಯಥಾ ಉಪಬಂಧಿಸಿದ್ದ ಹೊರತು, ದಾಸ್ತಾನು ಇಟ್ಟ ಅವಧಿಯು ಒಂದು ತಿಂಗಳಿಗಿಂತ ಕಡಿಮೆ ಇದ್ದರೆ ಇಡೀ ತಿಂಗಳ ಚಾರ್ಜನ್ನು ವಿಧಿಸಲಾಗುವುದು.

3. **ಹಿಂದಿರುಗಿಸುವಾಗ ಅನುಸರಿಸಬೇಕಾದ ಅಗತ್ಯತೆಗಳು.-** (ಎ) ಸರಕುಗಳನ್ನು ಹಿಂದಿರುಗಿಸಲು ಅಥವಾ ವರ್ಗಾಯಿಸಲು ಇರುವ ಸೂಚನೆಗಳು ಯಾವಾಗಲೂ ಲಿಖಿತದಲ್ಲಿರತಕ್ಕದ್ದು ಮತ್ತು ಸರಕು ದಾಸ್ತಾನುದಾರನು ಅಥವಾ ಅವನ ಅಧಿಕೃತ ಏಜೆಂಟನು ಅದಕ್ಕೆ ಸಹಿ ಮಾಡಿರತಕ್ಕದ್ದು.

(ಬಿ) ಒಂದು ಉಗ್ರಾಣದ ರಸೀದಿಯನ್ನು ನೀಡಿರುವಾಗ, ಅದರಲ್ಲಿ ಹೇಳಿರುವ ಸರಕುಗಳನ್ನು ರದ್ದುಗೊಳಿಸುವಂತೆ ಅಥವಾ ಭಾಗಶಃ ಹಿಂದಿರುಗಿಸುವಂತೆ ಸೂಕ್ತ ರೀತಿಯಲ್ಲಿ ಹಿಂಬರಹ ಮಾಡಿದ ರಸೀದಿಯನ್ನು ಒಪ್ಪಿಸಿದ ಹೊರತು, ಆ ರಸೀದಿಯಲ್ಲಿರುವ ಯಾವುದೇ ಸರಕನ್ನು ನೀಡತಕ್ಕದ್ದಲ್ಲ.

(ಸಿ) ಒಂದು ಉಗ್ರಾಣ ರಸೀದಿಯು ಕಳೆದುಹೋದಲ್ಲಿ ಅಥವಾ ನಾಶವಾದಲ್ಲಿ, ಆ ಸರಕುಗಳ ಸ್ವಾಧೀನಕ್ಕೆ ಕಾನೂನುಬದ್ಧವಾಗಿ ಹಕ್ಕು ಹೊಂದಿರುವ ವ್ಯಕ್ತಿಯು ಒಂದು ದ್ವಿಪ್ರತಿ ರಸೀದಿಯನ್ನು ಪಡೆದು ಅದನ್ನು ಒಪ್ಪಿಸುವವರೆಗೆ ಅದರಲ್ಲಿ ಹೇಳಿರುವ ಸರಕುಗಳನ್ನು ಹಿಂದಿರುಗಿಸತಕ್ಕದ್ದಲ್ಲ. ಈ ಅಧಿನಿಯಮ ಮತ್ತು ನಿಯಮಗಳ ಅಡಿಯಲ್ಲಿ ಉಪಬಂಧಿಸಲಾದಂತೆ, ಅಂಥ ನಿಬಂಧನೆಗಳು ಮತ್ತು ಷರತ್ತುಗಳ ಮೇಲೆ ಮತ್ತು ಯಾವುವೇ ಹೊಣೆಗಾರಿಕೆಯ ಪ್ರತಿಯಾಗಿ ಉಗ್ರಾಣ ಪಾಲಕನಿಗೆ ಒಂದು ನಷ್ಟಭರ್ತಿ ಬಂಧಪತ್ರವನ್ನು ಒದಗಿಸಿದ ಮೇಲೆ ದ್ವಿಪ್ರತಿ ರಸೀದಿಯನ್ನು ನೀಡಲಾಗುವುದು.

4. **ಹೊಣೆಗಾರಿಕೆ.-** (ಎ) ಉಗ್ರಾಣಪಾಲಕನು, ಸರಕುಗಳನ್ನು ಇಟ್ಟುಕೊಳ್ಳುವುದಕ್ಕೆ ಕಾನೂನಿನ ಮೂಲಕ ಅಗತ್ಯಪಡಿಸಲಾದಂತೆ ಸೂಕ್ತವಾದ ಎಚ್ಚರಿಕೆ ಮತ್ತು ಜಾಗರೂಕತೆ ತೋರಿಸುವ ಜವಾಬ್ದಾರಿ ವಹಿಸುತ್ತಾನೆ.

(ಬಿ) ಉಗ್ರಾಣಪಾಲಕನ ಹೊಣೆಗಾರಿಕೆಯು, ದಾಸ್ತಾನು ಇಟ್ಟ ದಿನಾಂಕದಂದು ಇದ್ದಂಥ ಸರಕುಗಳ ಮೌಲ್ಯಕ್ಕೆ ಸೀಮಿತವಾಗಿರುತ್ತದೆ.

(ಸಿ) ಕೆಟ್ಟು ಹೋಗುವ ಸರಕುಗಳು ಅಥವಾ ಉಷ್ಣತೆ ಅಥವಾ ಆರ್ದ್ರತೆಯ ಬದಲಾವಣೆಗಳಿಂದಾಗಿ ಹಾನಿಗೆ ಒಳಗಾಗುವಂಥ ಸರಕುಗಳನ್ನು ಸಾಮಾನ್ಯ ದಾಸ್ತಾನು ಪರಿಸ್ಥಿತಿಗಳಿಂದ ಉಂಟಾಗಬಹುದಾದಂಥ ಹಾನಿಗೆ ಸಂಬಂಧಪಟ್ಟಂತೆ ಮಾಲೀಕನ ಜವಾಬ್ದಾರಿಯ ಮೇಲೆ ಮಾತ್ರ ಸ್ವೀಕರಿಸಲಾಗುವುದು.

(ಡಿ) ಸರಕು ದಾಸ್ತಾನುದಾರನು, ಸರಕುಗಳನ್ನು ಹಿಂತೆಗೆದುಕೊಳ್ಳುವ ಕಾಲಕ್ಕೆ ಅವುಗಳನ್ನು ಪರೀಕ್ಷಿಸತಕ್ಕದ್ದು ಮತ್ತು ಹಿಂತೆಗೆದುಕೊಳ್ಳುವ ಕಾಲದಲ್ಲಿ ಸರಕುಗಳಿಗೆ ಯಾವುದೇ ನಷ್ಟ ಅಥವಾ ಹಾನಿ ಉಂಟಾಗಿದ್ದರೆ, ತತ್‌ಕ್ಷಣ ಅದರ ಪೂರ್ಣ ವಿವರಗಳೊಂದಿಗೆ ಲಿಖಿತ ನೋಟೀಸನ್ನು ಉಗ್ರಾಣಪಾಲಕನಿಗೆ ನೀಡತಕ್ಕದ್ದು. ನೋಟೀಸಿನ ಒಂದು ಪ್ರತಿಯನ್ನು, ನಿಯಮಿಸಲಾದ ಪ್ರಾಧಿಕಾರಕ್ಕೆ ಸಹ ಕಳುಹಿಸತಕ್ಕದ್ದು. ಸರಕು ದಾಸ್ತಾನುದಾರನು, ನಷ್ಟದ ಅಥವಾ ಹಾನಿಯ ಬಗ್ಗೆ ನೋಟಿಸನ್ನು ನೀಡದಿದ್ದರೆ, ಉಗ್ರಾಣ ಪಾಲಕನ ವಿರುದ್ಧದ ಯಾವುದೇ ಕ್ಲೇಮು ಮಾನ್ಯವಾಗತಕ್ಕದ್ದಲ್ಲ. ಒಂದು ವೇಳೆ ಉಗ್ರಾಣದಲ್ಲಿ ಸರಕುಗಳನ್ನು ದಾಸ್ತಾನು ಇಟ್ಟಿರುವಾಗ ನಷ್ಟ ಅಥವಾ ಹಾನಿ ಉಂಟಾಗಿದೆಯೆಂದು ಸರಕು ದಾಸ್ತಾನುದಾರನಿಗೆ ತಿಳಿದುಬಂದ ಸಂದರ್ಭದಲ್ಲಿ, ಹಾನಿಪರಿಹಾರದ ಕ್ಲೇಮಿನ ಬಗ್ಗೆ ಅಂಥದೇ ನೋಟೀಸನ್ನು ಉಗ್ರಾಣಪಾಲಕನಿಗೆ ನೀಡತಕ್ಕದ್ದು.

(ಇ) ದಾಸ್ತಾನು ಇಟ್ಟಿರುವ ಅವಧಿಯಲ್ಲಿ, ಸ್ವಾಭಾವಿಕ ಕಾರಣಗಳಿಂದಾಗಿ ತೂಕದಲ್ಲಿ ಆಗುವ ಸಾಮಾನ್ಯ ಅಥವಾ ವಾಡಿಕೆಯ ಕುಗ್ಗುವಿಕೆಗೆ ಮತ್ತು ಗುಣಮಟ್ಟದ ಮೇಲೆ ಆಗುವ ಪರಿಣಾಮಕ್ಕೆ ಉಗ್ರಾಣಪಾಲಕನು ಜವಾಬ್ದಾರನಾಗಿರುವುದಿಲ್ಲ.

(ಎಫ್) ಉಗ್ರಾಣದ ರಸೀದಿಯಲ್ಲಿ ನಿರ್ದಿಷ್ಟವಾಗಿ ನಮೂದಿಸಿದ ಹೊರತು, ಉಗ್ರಾಣಪಾಲಕನಿಗೆ ಸರಕುಗಳ ಗುಣಮಟ್ಟ ಸ್ಥಿತಿ, ಮೌಲ್ಯ ಮತ್ತು ಒಳಗಿರುವ ವಸ್ತುವಿನ ಬಗ್ಗೆ ತಿಳಿದಿರುವುದಿಲ್ಲ.

5. (1) ಸರಕು ದಾಸ್ತಾನುದಾರನ ಕೋರಿಕೆಯ ಮೇಲೆ ಸರಕುಗಳನ್ನು ಒಂದು ಕೊಠಡಿಯಿಂದ ಮತ್ತೊಂದು ಕೊಠಡಿಗೆ ಅಥವಾ ಒಂದು ಉಗ್ರಾಣದಿಂದ ಮತ್ತೊಂದಕ್ಕೆ ವರ್ಗಾಯಿಸುವಾಗ ನಿರ್ವಹಣೆಯ ಅಥವಾ ಸಾಗಣೆಯ ಶುಲ್ಕ ಯಾವುದಾದರೂ ಇದ್ದರೆ, ಅದನ್ನು ವಿಧಿಸಲಾಗುವುದು.

(2) ಉಗ್ರಾಣ ಪಾಲಕನು ಸಹ ಯಾವುದೇ ನೋಟೀಸು ನೀಡದೆ ತನ್ನ ಸ್ವಂತ ವೆಚ್ಚದಲ್ಲಿ ದಾಸ್ತಾನಿನಲ್ಲಿರುವ ಯಾವುವೇ ಸರಕುಗಳನ್ನು ಒಂದು ಕೊಠಡಿಯಿಂದ ಮತ್ತೊಂದಕ್ಕೆ ವರ್ಗಾವಣೆ ಮಾಡಬಹುದು. ಆದರೆ, ದಾಸ್ತಾನಿನ ವರ್ಗದಲ್ಲಿ ವರ್ಗಾವಣೆಗೆ ಯಾವುದೇ ಶುಲ್ಕ ವಿಧಿಸಬಾರದು.

6. ಸರಕು ದಾಸ್ತಾನುದಾರನ ಹಿತದೃಷ್ಟಿಯಿಂದ ಒದಗಿಸಲಾದ ನಿರ್ವಹಣೆ, ಸರಕು ತುಂಬುವುದು, ಸರಕು ಇಳಿಸುವುದು ಮತ್ತು ಹೆಚ್ಚಿನ ಸೇವೆಗಳು - ಇವುಗಳಿಗೆ ತಗುಲುವ ವೆಚ್ಚಗಳನ್ನು, ಸರಕು ದಾಸ್ತಾನುದಾರನು ವಾಡಿಕೆಯ ಉಗ್ರಾಣ ಶುಲ್ಕದ ಜೊತೆಗೆ ಹೆಚ್ಚುವರಿಯಾಗಿ ಸಂದಾಯ ಮಾಡತಕ್ಕದ್ದು.

**ನಮೂನೆ ಸಂಖ್ಯೆ 7**

(25ನೇ ನಿಯಮ ನೋಡಿ)

**ದಾಸ್ತಾನು ರಿಜಿಸ್ಟರ್**

ವಿಶೇಷ ಗೋದಾಮು ಸಂಖ್ಯೆ.......... ನಿಗದಿಗೊಳಿಸಿದ ಬಾಡಿಗೆ...............

ಗೋದಾಮು ಇರುವ ಸ್ಥಳ ......... ಸಂದಾಯ ಮಾಡಬೇಕಾದ ದಿನಾಂಕ ..........

ಮಾಲೀಕನ ಹೆಸರು .......... ಸಂದಾಯ ಮಾಡಿದ ದಿನಾಂಕ ..........

ಗೋದಾಮನ್ನು ಬಾಡಿಗೆಗೆ ಪಡೆದಿದ್ದರೆ, ಬಾಡಿಗೆಯ ಅವಧಿ ..........ರಿಂದ .......... ವರೆಗೆ

ಬಾಡಿಗೆ ಪಡೆದವರ ಹೆಸರುಗಳು ..........

ವಿಮಾ ಪಾಲಿಸಿಗಳ ಉಲ್ಲೇಖ ..........

ವಿಮೆ ಮಾಡಿಸಿದ ಕಂಪನಿಯ ಹೆಸರು ..........

ಎಷ್ಟು ಮೊಬಲಗಿಗೆ ವಿಮೆ ಮಾಡಿಸಲಾಗಿದೆ ..........

| | | ಸ್ವೀಕರಿಸಿದ ಸರಕುಗಳ ವಿವರಣೆ ಮತ್ತು ಪರಿಮಾಣ ಮತ್ತು ಸರಕುಗಳ ಮೇಲೆ ವಿಶೇಷ ಗುರುತು ಯಾವುದಾದರೂ ಇದ್ದರೆ, ಅದು | | | | ಬಿಡುಗಡೆ ಮಾಡಲಾದ ಅಥವಾ ಹಿಂದಿರುಗಿಸಿದ ಸರಕುಗಳ ವಿವರ | | | |
|---|---|---|---|---|---|---|---|---|---|
| ಸರಕುಗಳನ್ನು ದಾಸ್ತಾನು ಮಾಡಿದ ದಿನಾಂಕ | ಸರಕುಗಳ ಘಟಕಗಳನ್ನು ದಾಸ್ತಾನು ಮಾಡಿದ ವ್ಯಕ್ತಿಗಳ ಹೆಸರು | ಘಟಕಗಳ ಸಂಖ್ಯೆ | ತೂಕ ಮತ್ತು/ ಅಥವಾ ಅಳತೆ | ಮಾನಕ/ ಗುಣಮಟ್ಟದ ಶ್ರೇಣಿ | ಸರಕು ರಸೀದಿ ಸಂಖ್ಯೆ | ಘಟಕಗಳ ಸಂಖ್ಯೆ | ತೂಕ ಮತ್ತು/ ಅಥವಾ ಅಳತೆ | ಮಾನಕ ಅಥವಾ ಗುಣಮಟ್ಟದ ಶ್ರೇಣಿ | ಹಿಂದಿರುಗಿಸಿದ ಆದೇಶ ಸಂಖ್ಯೆ |
| 1 | 2 | | 3 | | 4 | | 5 | | 6 |
| | | | | | | | | | |

| ದಾಸ್ತಾನು ಶಿಲ್ಕು | | | ಸರಕುಗಳನ್ನು ದಾಸ್ತಾನು ಇಟ್ಟ ದಿನಾಂಕದಂದು ಇದ್ದಂಥ ಸರಕುಗಳ ಮಾರುಕಟ್ಟೆ ದರ | ಸರಕುಗಳನ್ನು ಸ್ವೀಕರಿಸಿದ ಅಥವಾ ಹಿಂದಿರುಗಿಸಿದ ಗೋದಾಮು ಪಾಲಕನ ಚಿಕ್ಕರುಜು | ತಪಾಸಣಾಧಿಕಾರಿಯ ಚಿಕ್ಕ ರುಜು ಅಥವಾ ತಪಾಸಣೆ ಮಾಡಿದ ದಿನಾಂಕ | ಪರಿಶೀಲನಾಧಿಕಾರಿಯ ಷರಾ,ಯಾವುದಾದರೂ ಇದ್ದರೆ | ಲೆಡ್ಜರ್ ಉಲ್ಲೇಖ |
|---|---|---|---|---|---|---|---|
| ಘಟಕಗಳ ಸಂಖ್ಯೆ | ತೂಕ ಮತ್ತು/ ಅಥವಾ ಅಳತೆ | ಮಾನಕ/ ಗುಣಮಟ್ಟದ ಶ್ರೇಣಿ | | | | | |
| | 7 | | 8 | 9 | 10 | 11 | 12 |
| | | | | | | | |

## ನಮೂನೆ ಸಂಖ್ಯೆ 8

### (25ನೇ ನಿಯಮ ನೋಡಿ)

### ಸರಕು ದಾಸ್ತಾನುದಾರನ ಲೆಡ್ಜರು

ದಾಸ್ತಾನು ಸಂಖ್ಯೆ ............ ಗೋದಾಮು ............ ಕಂಪೆನಿಯ ಹೆಸರು.............. ಮೊಬಲಗು ................ ಸರಕು ದಾಸ್ತಾನುದಾರನ ಹೆಸರು........... ದಾಸ್ತಾನು ಮಾಡಲಾದ ಸ್ಥಳ ............... ವಿಮೆಯ ವಿವರಗಳು ...................... ಅವಧಿ .................... ಸರಕು ದಾಸ್ತಾನುದಾರನ ವಿಳಾಸ........................ ಗೋದಾಮು ನೋಂದಣಿ ಸಂಖ್ಯೆ ...................... ಪಾಲಿಸಿಗಳ ಸಂಖ್ಯೆ....................... ಮುಕ್ತಾಯದ ದಿನಾಂಕ ..................

ಪ್ರವರ್ತಕರ
ಅಥವಾ ವರ್ಗಾವಣೆ
ಪಡೆದವರ ಹೆಸರು ............
ಮಾದರಿ ಸಹಿ ಕಾರ್ಡಿಗೆ
ಸಂಬಂಧಿಸಿದ ಉಲ್ಲೇಖ

| ಸ್ವೀಕರಿಸಿದ ಸರಕುಗಳ ವಿವರ | | | | | | ಹಿಂತಿರುಗಿಸಿದ/ಬಿಡುಗಡೆ ಮಾಡಿದ ಸರಕುಗಳ ವಿವರಣೆ | | | ಸರಕು ದಾಸ್ತಾನುದಾರರು ಮಾಡಿದ ಸಂದಾಯಗಳ ವಿವರಗಳು |
|---|---|---|---|---|---|---|---|---|---|
| ಸರಕು ದಾಸ್ತಾನು ಇಟ್ಟ ದಿನಾಂಕ | ದಾಸ್ತಾನು ಮಾಡುವ ಅಥವಾ ಸ್ವಚ್ಛ ಮಾಡುವ ವೆಚ್ಚ ಮತ್ತು ಸುರಕ್ಷಿತ ಅಭಿರಕ್ಷೆಯ ವೆಚ್ಚಗಳು | ಸರಕು ರಸೀದಿ ಸಂಖ್ಯೆ | ಮೂಟೆಗಳ ಅಥವಾ ಚೀಲಗಳ ಸಂಖ್ಯೆ ಅಥವಾ ಪರಿಮಾಣ (ಸರಕುಗಳ ಮೇಲೆ ವಿಶೇಷ ಗುರುತು ಯಾವುವಾದರೂ ಇದ್ದರೆ ಅವು) | ತೂಕ ಮತ್ತು/ ಅಥವಾ ಅಳತೆ | ಮಾನಕದ ಅಥವಾ ಗುಣಮಟ್ಟದ ಶ್ರೇಣಿ | ಮೂಟೆಗಳ ಅಥವಾ ಚೀಲಗಳ ಸಂಖ್ಯೆ ಅಥವಾ ಗುಣಮಟ್ಟ | ತೂಕ ಮತ್ತು/ ಅಥವಾ ಅಳತೆ | ಮಾನಕದ ಅಥವಾ ಗುಣಮಟ್ಟದ ಶ್ರೇಣಿ | ಸಂದಾಯದ ದಿನಾಂಕ ಮೊತ್ತ |
| 1 | 2 | 3 | | 4 | | | 5 | | 6 |
| | | | | | | | | | |

### ದಾಸ್ತಾನು ಶಿಲ್ಕು

| ಹಿಂದಿರುಗಿಸಿದ ಆದೇಶ ಸಂಖ್ಯೆ | ಗೋದಾಮು ಪಾಲಕನ ಚಿಕ್ಕರುಜು | ಮೂಟೆಗಳ ಸಂಖ್ಯೆ (ಎ) | ತೂಕ ಮತ್ತು/ ಅಥವಾ ಅಳತೆ (ಬಿ) | ಮಾನಕ ಅಥವಾ ಗುಣಮಟ್ಟದ ಶ್ರೇಣಿ (ಸಿ) | ದಾಸ್ತಾನು ಇಟ್ಟ ದಿನಾಂಕದಂದು ಇದ್ದಂಥ ದಾಸ್ತಾನು ಸರಕುಗಳ ಮಾರುಕಟ್ಟೆ ದರ | ಸರಕುಗಳನ್ನು ಯಾರಿಗೆ ವರ್ಗಾವಣೆ ಮಾಡಲಾಗಿದೆಯೋ ಆ ವರ್ಗಾವಣೆ ಪಡೆದವನ ಅಥವಾ ಮುಂಗಡಗಳು ಯಾವುವಾದರೂ ಇದ್ದರೆ ಅವುಗಳಿಗೆ ಭದ್ರತೆಯಾಗಿ ಸರಕುಗಳನ್ನು ಹೊಂದಿರುವವನ ಹೆಸರು | ಗುರುತುಗಳಿಗೆ ಅಥವಾ ಸ್ವಾಧೀನವನ್ನು ವರ್ಗಾವಣೆ ಮಾಡುವ ಲಿಖಿತಕ್ಕೆ ಅಥವಾ ದಸ್ತಾವೇಜಿಗೆ ಉಲ್ಲೇಖ | ಷರಾಗಳು |
|---|---|---|---|---|---|---|---|---|
| 7 | 8 | | 9 | | 10 | 11 | 12 | 13 |
| | | | | | | | | |

## ನಮೂನೆ ಸಂಖ್ಯೆ 9

(25ನೇ ನಿಯಮ ನೋಡಿ)

| ದಾಸ್ತಾನುದಾರನ ಹೆಸರು | ಉಗ್ರಾಣ ರಸೀದಿ ಸಂಖ್ಯೆ | ಸರಕುಗಳ ಮೌಲ್ಯ | ವಿಮೆ ಮಾಡಿಸಿದ ಮೊಬಲಗು | ವಿಮಾ ಅವಧಿ | ವಿಮೆ ಮಾಡಿಸಿರುವ ವಿಮಾ ಕಂಪನಿಗಳ ಹೆಸರು | ವಿಮಾ ಪಾಲಿಸಿಯ ಸಂಖ್ಯೆ | ವಿಮಾ ಶುಲ್ಕದ ಮೊಬಲಗು | ಕೈ ವೆಚ್ಚದ ಮೊಬಲಗು | ಷರಾ |
|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 |
| | | | | | | | | | |

## ನಮೂನೆ ಸಂಖ್ಯೆ 10

(29ನೇ ನಿಯಮ ನೋಡಿ)

### ತೂಕ ಮಾಡುವ/ಮಾದರಿಗಳ ಪರೀಕ್ಷೆ ಮಾಡುವ/ಶ್ರೇಣಿ ನಿರ್ಧರಿಸುವ ಲೈಸೆನ್ಸಿಗಾಗಿ ಅರ್ಜಿ

.................

................. ಇವರಿಗೆ

ಮಾನ್ಯರೆ,

ಕರ್ನಾಟಕ ಉಗ್ರಾಣಗಳ ಅಧಿನಿಯಮ, 1961 ಮತ್ತು ಅದರ ಅಡಿಯಲ್ಲಿ ರಚಿಸಿದ ನಿಯಮಗಳ ಅನುಸಾರ *ತೂಕ ಮಾಡುವ/ ಮಾದರಿಗಳ ಪರೀಕ್ಷೆ ಮಾಡುವ/ ಶ್ರೇಣಿ ನಿರ್ಧರಿಸುವ ಲೈಸೆನ್ಸಿಗಾಗಿ ಮತ್ತು ಕರ್ನಾಟಕ ಉಗ್ರಾಣಗಳ ಅಧಿನಿಯಮ, 1961ರ ಅಡಿಯಲ್ಲಿ ಲೈಸೆನ್ಸಿಗಾಗಿ ಅರ್ಜಿಯನ್ನು ಸಲ್ಲಿಸಿರುವಂಥ / ಲೈಸೆನ್ಸ್ ಪಡೆದಿರುವ ಈ ಮುಂದಿನ ಉಗ್ರಾಣದಲ್ಲಿ ದಾಸ್ತಾನು ಮಾಡಲಾಗಿರುವ ಅಥವಾ ದಾಸ್ತಾನು ಮಾಡಬೇಕಾಗಿರುವ............. **ಇವುಗಳ ತೂಕ/ ವರ್ಗ/ಶ್ರೇಣಿಯ ಬಗ್ಗೆ ಪ್ರಮಾಣೀಕರಿಸುವ ಲೈಸೆನ್ಸಿಗಾಗಿ ನಾನು ಈ ಮೂಲಕ ಅರ್ಜಿ ಸಲ್ಲಿಸಿದ್ದೇನೆ.

| ಉಗ್ರಾಣದ ಹೆಸರು | ಉಗ್ರಾಣಗಳ ಸಂಖ್ಯೆ ಮತ್ತು / ಅಥವಾ ಲೈಸೆನ್ಸ್ ಸಂಖ್ಯೆ | ಉಗ್ರಾಣಗಳ ಸ್ಥಳ |
|---|---|---|
| | | |

2. ಅಧಿನಿಯಮ ಮತ್ತು ನಿಯಮಗಳ ನಿಬಂಧನೆಗಳು ನನಗೆ ಸಂಬಂಧಪಡುವಷ್ಟರ ಮಟ್ಟಿಗೆ ಅವುಗಳನ್ನು ಪಾಲಿಸಲು ಮತ್ತು ಅನುಸರಿಸಲು ಒಪ್ಪಿದ್ದೇನೆ.

3. ನಾನು ................... ರೂಪಾಯಿಗಳ ಲೈಸೆನ್ಸ್ ಫೀಜನ್ನು ಸಂದಾಯ ಮಾಡಿರುವ ಬಗ್ಗೆ ಖಜಾನೆ ರಸೀದಿಯನ್ನು ಲಗತ್ತಿಸಿದ್ದೇನೆ.

(ಅರ್ಜಿದಾರನು ಈ ಮುಂದಿನ ಪ್ರಶ್ನೆಗಳಿಗೆ ಉತ್ತರಿಸಬೇಕು)

1. ಪೂರ್ಣ ಹೆಸರು
2. ಮನೆಯ ವಿಳಾಸ
3. ಜನ್ಮ ದಿನಾಂಕ
4. ಪ್ರಸಕ್ತ ಉದ್ಯೋಗ
5. ಪ್ರಸಕ್ತ ನಿಯೋಜಕನ ಹೆಸರು ಮತ್ತು ವಿಳಾಸ

6. ಕಳೆದ ಐದು ವರ್ಷಗಳಲ್ಲಿ ನೀವು ಎಲ್ಲಿ ನಿಯೋಜಿತರಾಗಿದ್ದಿರಿ?

7. ನಿಮ್ಮನ್ನು ಯಾವಾಗಲಾದರೂ ನೌಕರಿಯಿಂದ ಮುಕ್ತಗೊಳಿಸಲಾಗಿತ್ತೇ? ಹಾಗಿದ್ದರೆ, ನಿಯೋಜಕನ ಹೆಸರು ಮತ್ತು ವಿಳಾಸವನ್ನು ಮತ್ತು ಮುಕ್ತಗೊಳಿಸಿದ್ದಕ್ಕೆ ಕಾರಣಗಳನ್ನು ತಿಳಿಸಿ

8. ಯಾವ ಸೇವೆಗಳನ್ನು ನಿರ್ವಹಿಸುವುದಕ್ಕಾಗಿ ಲೈಸೆನ್ಸ್ ಪಡೆಯಲು ಅರ್ಜಿ ಸಲ್ಲಿಸಿರುವಿರೋ ಅಂಥವೇ ಸೇವೆಗಳನ್ನು ನಿರ್ವಹಿಸಲು ನೀವು ಎಂದಾದರೂ ಲೈಸೆನ್ಸ್ ಪಡೆದಿದ್ದಿರಾ? ಹಾಗಿದ್ದರೆ ವಿವರಗಳನ್ನು ನೀಡಿ

9. ನೀವು ಯಾವ ಸೇವೆಗಳನ್ನು ನಿರ್ವಹಿಸುವುದಕ್ಕಾಗಿ ಲೈಸೆನ್ಸ್ ಪಡೆಯಲು ಅರ್ಜಿ ಸಲ್ಲಿಸಿರುವಿರೋ ಅಂಥವೇ ಸೇವೆಗಳನ್ನು ನೀವು ಎಂದಾದರೂ ನೆರವೇರಿಸಿರುವಿರಾ? ಹಾಗಿದ್ದರೆ ವಿವರಗಳನ್ನು ನೀಡಿ

10. ನೀವು ಯಾವುವೇ ವಿಶೇಷ ವಿದ್ಯಾರ್ಹತೆಗಳನ್ನು ಹೊಂದಿದ್ದೀರಾ?

11. ನೀವು ಯಾವ ಹುದ್ದೆಯ ಕರ್ತವ್ಯಗಳನ್ನು ನಿರ್ವಹಿಸುವುದಕ್ಕಾಗಿ ಲೈಸೆನ್ಸ್ ಪಡೆಯಲು ಅರ್ಜಿ ಸಲ್ಲಿಸಿರುವಿರೋ ಆ ಕರ್ತವ್ಯಗಳನ್ನು ನಿರ್ವಹಿಸಲು ಬೇಕಾದ ಶಾರೀರಿಕ ದಾರ್ಢ್ಯತೆ ಹೊಂದಿರುವಿರಾ? ನಿಮಗೆ ಯಾವುದೇ ದೃಷ್ಟಿದೋಷ ಅಥವಾ ಕಣ್ಣಿನ ಕಾಯಿಲೆ ಇದೆಯೇ?

12. ನಿಮ್ಮ ವಿದ್ಯಾರ್ಹತೆಯ ಬಗ್ಗೆ ವೈಯಕ್ತಿಕವಾಗಿ ತಿಳಿದಿರುವಂಥ ಮೂವರು ವ್ಯಕ್ತಿಗಳ ಹೆಸರು ಮತ್ತು ವಿಳಾಸಗಳು (ಅವರಲ್ಲಿ ಇಬ್ಬರು ಅರ್ಜಿಯಲ್ಲಿ ಉಲ್ಲೇಖಿಸಿರುವ ಉತ್ಪನ್ನ ವನ್ನು ನಿರ್ವಹಿಸುವ ವಾಣಿಜ್ಯ ಉದ್ಯಮಗಳಲ್ಲಿ ಕಾರ್ಯನಿರತರಾಗಿರಬೇಕು)

ಮೇಲೆ ಹೇಳಿರುವ ವಿವರಗಳು ನನ್ನ ತಿಳಿವಳಿಕೆ ಮತ್ತು ನಂಬಿಕೆಯ ಮಟ್ಟಿಗೆ ಸತ್ಯವಾಗಿವೆ ಎಂದು ಘೋಷಿಸುತ್ತೇನೆ.

ಸ್ಥಳ:

ದಿನಾಂಕ: ಅರ್ಜಿದಾರನ ಸಹಿ

* ಅನಗತ್ಯವಾದುದನ್ನು ಹೊಡೆದು ಹಾಕಿ.

**ಇಲ್ಲಿ ಸರಕುಗಳ ಹೆಸರುಗಳನ್ನು ನಮೂದಿಸಿ.

## ನಮೂನೆ ಸಂಖ್ಯೆ 11

**(30ನೇ ನಿಯಮ ನೋಡಿ)**

**........ ಸರಕನ್ನು ತೂಕ ಮಾಡಲು/ಮಾದರಿಗಳ ಪರೀಕ್ಷೆ ಮಾಡಲು/ಶ್ರೇಣಿಗಳ ನಿರ್ಧರಣೆ ಮಾಡಲು ಲೈಸೆನ್ಸಿನ ನಮೂನೆ.**

ಕ್ರಮ ಸಂಖ್ಯೆ. 200... ರ ಮಾರ್ಚ್ 31ರ ವರೆಗೆ ಸಿಂಧುವಾಗಿರುತ್ತದೆ

.............. ಜಿಲ್ಲೆಯ .............. ತಾಲ್ಲೂಕಿನ ................ ಎಂಬಲ್ಲಿ ವಾಸವಾಗಿರುವ ಶ್ರೀ ............ಇವರ ಮಗನಾದ ಶ್ರೀ ..................... ಎಂಬವರಿಗೆ ಕರ್ನಾಟಕ ಉಗ್ರಾಣಗಳ ಅಧಿನಿಯಮ, 1961ರ 23ನೇ ಪ್ರಕರಣದ (1)ನೇ ಉಪ ಪ್ರಕರಣದ ಅಡಿಯಲ್ಲಿ *ತೂಕ ಮಾಡಲು / ಮಾದರಿಗಳ ಪರೀಕ್ಷೆ ಮಾಡಲು/ ಶ್ರೇಣಿ ನಿರ್ಧರಿಸಲು ಮತ್ತು ಸದರಿ ಅಧಿನಿಯಮದ ಅಡಿಯಲ್ಲಿ, ಲೈಸೆನ್ಸ್ ಪಡೆದ ಅಥವಾ ಲೈಸೆನ್ಸಿಗಾಗಿ ಅರ್ಜಿ ಸಲ್ಲಿಸಿರುವ ಈ ಮುಂದಿನ ಉಗ್ರಾಣದಲ್ಲಿ ದಾಸ್ತಾನು ಮಾಡಿದ ಅಥವಾ ದಾಸ್ತಾನು ಮಾಡಬೇಕಾದ .......... **ಸರಕುಗಳ ತೂಕ/ ವರ್ಗ/ ಶ್ರೇಣಿಯ ಬಗ್ಗೆ ಪ್ರಮಾಣೀಕರಿಸಲು ಈ ಮೂಲಕ ಲೈಸೆನ್ಸ್ ನೀಡಲಾಗಿದೆ.

| ಉಗ್ರಾಣಪಾಲಕನ ಹೆಸರು | ಉಗ್ರಾಣದ ಹೆಸರು ಮತ್ತು ಲೈಸೆನ್ಸ್ ಸಂಖ್ಯೆ | ಉಗ್ರಾಣ ಇರುವ ಸ್ಥಳ |
|---|---|---|
| | | |

ಲೈಸೆನ್ಸಿನ ಷರತ್ತುಗಳು:

(1) ಈ ಲೈಸೆನ್ಸು 20 .... ಸಾಲಿನ ಮಾರ್ಚ್ 31ರ ವರೆಗೆ ಸಿಂಧುವಾಗಿರತಕ್ಕದ್ದು.

(2) ಈ ಲೈಸೆನ್ಸು ಕರ್ನಾಟಕ ಉಗ್ರಾಣಗಳ ಅಧಿನಿಯಮ, 1961 ಮತ್ತು ಅದರ ಅಡಿಯಲ್ಲಿ ರಚಿಸಲಾದ ನಿಯಮಗಳ ಉಪಬಂಧಗಳಿಗೆ ಒಳಪಟ್ಟಿರತಕ್ಕದ್ದು.

(3) ಈ ಲೈಸೆನ್ಸು ವರ್ಗಾವಣೀಯವಾಗಿರತಕ್ಕದ್ದಲ್ಲ.

(4) ಈ ಲೈಸೆನ್ಸನ್ನು ನಿಯಮಿಸಲಾದ ಪ್ರಾಧಿಕಾರಿ ಅಥವಾ ಅವರಿಂದ ಪ್ರಾಧಿಕೃತನಾದ ಇತರ ಯಾರೇ ವ್ಯಕ್ತಿಯು ಕೇಳಿದಾಗ ಹಾಜರುಪಡಿಸತಕ್ಕದ್ದು.

* ಅನಗತ್ಯವಾದುದನ್ನು ಹೊಡೆದು ಹಾಕಿ.

** ಇಲ್ಲಿ ಸರಕುಗಳ ಹೆಸರುಗಳನ್ನು ನಮೂದಿಸಿ.

## ನಮೂನೆ ಸಂಖ್ಯೆ 12

## (30ನೇ ನಿಯಮ ನೋಡಿ)

## ತೂಕ ಮಾಡುವವನು, ಮಾದರಿಗಳ ಪರೀಕ್ಷಕನು ಅಥವಾ ಶ್ರೇಣಿ ನಿರ್ಧರಣೆ ಮಾಡುವವನು ನೀಡಬೇಕಾದ ಪ್ರಮಾಣ ಪತ್ರದ ನಮೂನೆ.

| | |
|---|---|
| ತೂಕ / ಶ್ರೇಣಿ ಪ್ರಮಾಣ ಪತ್ರ | |
| ಧಾನ್ಯ ಅಥವಾ ಉತ್ಪನ್ನವನ್ನು ದಾಸ್ತಾನು ಮಾಡಬೇಕಾಗಿರುವಂಥ ಉಗ್ರಾಣದ ಹೆಸರು ಮತ್ತು ಅದು ಇರುವ ಸ್ಥಳ | |
| ಪ್ರಮಾಣ ಪತ್ರದ ದಿನಾಂಕ | |
| ಪ್ರಮಾಣ ಪತ್ರದ ಅನುಕ್ರಮ ಸಂಖ್ಯೆ | |
| ಪ್ರಮಾಣ ಪತ್ರದಲ್ಲಿ ನಮೂದಿಸಿರುವ ಧಾನ್ಯ ಅಥವಾ ಉತ್ಪನ್ನದ ತೂಕ | |
| ಪ್ರಮಾಣ ಪತ್ರದಲ್ಲಿ ನಮೂದಿಸಿರುವ ಧಾನ್ಯ ಅಥವಾ ಉತ್ಪನ್ನದ ವಿಧ | |
| ಲೈಸೆನ್ಸ್ ಪಡೆದಿರುವ ತೂಕ ಮಾಡುವವನು, ಮಾದರಿಗಳ ಪರೀಕ್ಷಕನು ಅಥವಾ ಶ್ರೇಣಿ ನಿರ್ಧರಣೆ ಮಾಡುವವನು ನಿರ್ಧರಿಸಿದಂತೆ ಧಾನ್ಯ ಅಥವಾ ಉತ್ಪನ್ನದ ಶ್ರೇಣಿ ಮತ್ತು / ಅಥವಾ ತೂಕ | |

ಈ ಪ್ರಮಾಣ ಪತ್ರವನ್ನು ಕರ್ನಾಟಕ ಉಗ್ರಾಣಗಳ ಅಧಿನಿಯಮ, 1961 ಮತ್ತು ಅದರ ಅಡಿಯಲ್ಲಿ ರಚಿಸಿದ ನಿಯಮಗಳ ಅನುಸಾರ ನೀಡಲಾಗಿದೆ.

ಲೈಸೆನ್ಸ್ ಪಡೆದಿರುವ ತೂಕ ಮಾಡುವವನ, ಮಾದರಿಗಳ ಪರೀಕ್ಷಕನ
ಅಥವಾ ಶ್ರೇಣಿ ನಿರ್ಧರಿಸುವವನ ಸಹಿ
(ಸಂ. ಡಿಪಿಸಿ 2 ಸಿಡಬ್ಲ್ಯುಎಚ್ 63)

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
ಬಿ.ಎಸ್. ನಾರಾಯಣಸ್ವಾಮಿ
ಅಧೀನ ಕಾರ್ಯದರ್ಶಿ.

## ಸಹಕಾರ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ: ಸಿಎಂಡಬ್ಲ್ಯೂ 39 ಡಬ್ಲ್ಯೂಎಚ್‌ಸಿ 89, ಬೆಂಗಳೂರು, ದಿನಾಂಕ: 22ನೇ ಸೆಪ್ಟೆಂಬರ್ 1990**

ಕರ್ನಾಟಕ ಉಗ್ರಾಣಗಳ ಅಧಿನಿಯಮ, 1961ರ (1962ರ ಕರ್ನಾಟಕ ಅಧಿನಿಯಮ ಸಂಖ್ಯೆ 11) 34ನೇ ಪ್ರಕರಣದ (1)ನೇ ಉಪ ಪ್ರಕರಣದಿಂದ ಅಗತ್ಯಪಡಿಸಲಾದಂತೆ, ಕರ್ನಾಟಕ ಉಗ್ರಾಣ ನಿಯಮಗಳು, 1969 ಇದನ್ನು ತಿದ್ದುಪಡಿ ಮಾಡುವ ನಿಯಮಗಳ ಕರಡನ್ನು, ಅದರಿಂದ ಬಾಧಿತರಾಗುವ ಸಂಭವವಿರುವ ಎಲ್ಲಾ ವ್ಯಕ್ತಿಗಳಿಂದ 1990ರ ಜುಲೈ 27 ರಂದು ಅಥವಾ ಅದಕ್ಕೂ ಮುಂಚೆ, ಆಕ್ಷೇಪಣೆಗಳು ಮತ್ತು ಸಲಹೆಗಳನ್ನು ಆಹ್ವಾನಿಸಿ ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 39 ಡಬ್ಲ್ಯೂಎಚ್‌ಸಿ 89, ದಿನಾಂಕ: 19ನೇ / 21ನೇ ಜೂನ್ 1990 ರಲ್ಲಿ ಕರ್ನಾಟಕ ರಾಜ್ಯ ಪತ್ರದ ಭಾಗ IV ಪ್ರಕರಣ 2ಸಿ(i) ರಲ್ಲಿ ದಿನಾಂಕ: 12ನೇ ಜುಲೈ 1990 ರಂದು ಪ್ರಕಟಿಸಿರುವುದರಿಂದ,

ಮತ್ತು ಸದರಿ ರಾಜ್ಯ ಪತ್ರವನ್ನು 12ನೇ ಜುಲೈ 1990 ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ;

ಮತ್ತು ಸದರಿ ಕರಡಿನ ಮೇಲೆ ಯಾವುವೇ ಆಕ್ಷೇಪಣೆಗಳು ಮತ್ತು ಸಲಹೆಗಳು ಬಾರದಿದ್ದುದರಿಂದ;

ಈಗ ಕರ್ನಾಟಕ ಉಗ್ರಾಣಗಳ ಅಧಿನಿಯಮ, 1961ರ (1962ರ ಕರ್ನಾಟಕ ಅಧಿನಿಯಮ ಸಂಖ್ಯೆ 11) 34ನೇ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತದೆ, ಎಂದರೆ:-

**1. ಹೆಸರು ಮತ್ತು ಪ್ರಾರಂಭ:-** (1) ಈ ನಿಯಮಗಳನ್ನು ಕರ್ನಾಟಕ ಉಗ್ರಾಣ (ತಿದ್ದುಪಡಿ) ನಿಯಮಗಳು, 1990 ಎಂದು ಕರೆಯತಕ್ಕದ್ದು.

(2) ಅವು ಈ ಕೂಡಲೇ ಜಾರಿಗೆ ಬರತಕ್ಕದ್ದು.

**3. 2ನೇ ನಿಯಮದ ತಿದ್ದುಪಡಿ:-** ಸದರಿ ನಿಯಮಗಳ 2ನೇ ನಿಯಮದ (7)ನೇ ಖಂಡದಲ್ಲಿ:

"ಜಂಟಿ ಮುಖ್ಯ ಮಾರುಕಟ್ಟೆ ಅಧಿಕಾರಿ" ಎಂಬ ಪದಗಳಿಗೆ "ಕೃಷಿ ಮಾರುಕಟ್ಟೆಯ ಹೆಚ್ಚುವರಿ ನಿರ್ದೇಶಕ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು
ಅವರ ಹೆಸರಿನಲ್ಲಿ,

ಆರ್. ಶಿವಾಜಿರಾವ್
ಸರ್ಕಾರದ ಅಧೀನ ಕಾರ್ಯದರ್ಶಿ.
ಸಹಕಾರ ಇಲಾಖೆ.

The above translation of The Karnataka Warehouse Act, 1961 (11 of 62) and The Karnataka Warehouse Rules, 1969, shall be authoritative text in the Kannada Language under section 5A of the Karnataka Official Language Act, 1963 (Karnataka Act 26 of 1963)

**GOVERNOR OF KARNATAKA**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ
ಜಿ. ದಕ್ಷಿಣಾಮೂರ್ತಿ
ಸರ್ಕಾರದ ಕಾರ್ಯದರ್ಶಿ,
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ

ಪಿ.ಆರ್.165